# ಚುರುಕಿನ ಬಚು

ಲೇಖಕ:—

ಕೃ. ಶ್ರೀ. ಹುನಗುಂದ

ಬೀ. ಎ.,

ಧಾರವಾಡ.




ಬೆಲೆ ೧೨ ಆಣೆ.

ಮುಂಬಯಿ ಇಲಾಖೆಯ ವಿದ್ಯಾಖಾತೆಯಿಂದ ಲಾಯಬ್ರರಿಗೂ, ಇನಾಮಿಗೂ ಮಂಜೂರಾಗಿದೆ.

# ಕುರುಹಿನ ಬಕುಳಹಾರವು





ಭವಭೂತಿ ಕವಿಯ

'ಮಾಲತೀಮಾಧವ'

ಎಂಬ ಸಂಸ್ಕೃತ ನಾಟಕದ ಕನ್ನಡ ಕಥಾರೂಪವು.



ಕೃಷ್ಣರಾವ ಶ್ರೀನಿವಾಸ ಹುನಗುಂದ, ಬೀ. ಏ.,

ಇವರು ರಚಿಸಿದ್ದು.



೩ನೇ ಆವೃತ್ತಿ ೧೦೦೦ ಪ್ರತಿಗಳು



೧೯೩೧

೧೨ ಆಣೆ

PRICE 12 As.

# ಪ್ರಸ್ತಾವನೆ.



ಸುಮಾರು ಮೂವತ್ತು ವರ್ಷಗಳ ಆಚೆ ವಿಜಾಪುರದ ಹಾಯುಸ್ಕೂಲಿನಲ್ಲಿ ಮೂವರು ತರುಣರು ಶಿಕ್ಷಕರಾಗಿದ್ದರು. ಅವರಲ್ಲಿ ಸ್ನೇಹಭಾವವಿದ್ದುದರಿಂದ ಅವಕಾಶವಿದ್ದ ಕಾಲದಲ್ಲಿ ಮೂವರು ಸಂಕಲಿತರಾಗಿ ಏನಾದರೊಂದು ಉದ್ಯೋಗವನ್ನು ಕೈಕೊಳ್ಳಬೇಕೆಂದು ಮನಸ್ಸಿನಲ್ಲಿ ಆಲೋಚನೆಯನ್ನು ಮಾಡಿದರು: ಆಗಿನ ಕಾಲದಲ್ಲಿ ಕನ್ನಡವಾಙ್ಮಯವು ತೀರ ಹೀನಸ್ಥಿತಿಯಲ್ಲಿತ್ತು. ಆದಕಾರಣ ಆ ವಾಙ್ಮಯವನ್ನು ಸುಧಾರಿಸುವ ಮಾರ್ಗವನ್ನು ಕಂಡುಹಿಡಿಯಬೇಕೆಂದು ಮೂವರೂ ಮಂತ್ರಾಲೋಚನೆಯನ್ನು ಮಾಡಿ ಇಂಗ್ಲಿಷಿನಲ್ಲಿ ಹ್ಯಾಗೆ ಚಾರ್ಲಸ ಲ್ಯಾಂಬ ಎಂಬ ಗ್ರಂಥಕಾರನು ಪ್ರಸಿದ್ಧ ಶೇಕ್ಸಪೀಯರ ಕವಿಯ ಕೆಲವು ನಾಟಕಗಳನ್ನು ಸುಲಭಗದ್ಯದಲ್ಲಿ ಪರಿವರ್ತಿಸಿ ಲೋಕಪ್ರಿಯ ಮಾಡಿದನೋ ಹಾಗೆಯೇ ಸಂಸ್ಕೃತದಲ್ಲಿಯ ನಾಟಕಗಳನ್ನು ಕನ್ನಡದಲ್ಲಿ ಕಥಾರೂಪವಾಗಿ ಪರಿವರ್ತಿಸಿ ಮಾಸ ಮಾಸಕ್ಕೆ ಪ್ರಕಟಿಸಬೇಕೆಂಬ ಆಲೋಚನೆಯು ಸರ್ವಸಮ್ಮತವಾಯಿತು. ಈ ಮೂವರಲ್ಲಿ ರಾ. ಶೇಷಗಿರಿರಾವ ಕೊಣ್ಣೂರ ಬೀ. ಏ. ಎಂಬವರು ಕಾಲಿದಾಸನ ಶಾಕುಂತಲ ನಾಟಕವನ್ನು ‘ ಕೇಡುತಂದ ಉಂಗರ ’ ವೆಂಬ ಹೆಸರಿನಿಂದ ಕನ್ನಡದಲ್ಲಿ ಬರೆಯಲಾರಂಭಿಸಿದರು. ರಾ. ಹಣಮಂತರಾವ ಸಗರ ಎಂಬವರು Loves of the Harem ಎಂಬ ಇಂಗ್ಲಿಷ ಕಾದಂಬರಿಯನ್ನು ‘ಅಂತಃಪುರದ ರಹಸ್ಯ’ವೆಂಬ ಹೆಸರಿನಿಂದ ಕನ್ನಡಲ್ಲಿ ಭಾಷಾಂತರಮಾಡತೊಡಗಿದರು. ಮೂರನೆಯವರಾದ ರಾ. ಕೃಷ್ಣರಾವ ಹುನಗುಂದ ಬೀ. ಏ. ಇವರು ಭವಭೂತಿಯ ಮಾಲತೀಮಾಧವವೆಂಬ ಮಹಾನಾಟಕವನ್ನು ‘ಕುರುಹಿನ ಬಕುಳಹಾರ’ ವೆಂಬ ಹೆಸರಿನಿಂದ ಕನ್ನಡದಲ್ಲಿ ಗದ್ಯರೂಪದಿಂದ ಪರಿವರ್ತಿಸತೊಡಗಿದರು. ಈ ಮೂವರ ಲೇಖಗಳು ತಿಂಗಳಿಗೊಮ್ಮೆ ‘ ಭಾಷಾಸೇವಕ ’ ವೆಂಬ ಹೆಸರಿನಿಂದ ಹೊಸದಾಗಿ ಹೊರಡಿಸಲ್ಪಟ್ಟ ಮಾಸಪತ್ರಿಕೆಯಲ್ಲಿ ಪ್ರಕಟಿಸಲಾರಂಭಿಸಿದವು. ಕ್ರಮೇಣ ಈ ಮೂರೂ ಲೇಖಗಳೂ ಮುಗಿದವು. ರಾ. ಕೃಷ್ಣರಾವ ಹುನಗುಂದ ಇವರು, ಕುರುಹಿನ ಬಕುಳಹಾರವು ಮುಗಿದ ನಂತರ ವಿಶಾಖದತ್ತನ ‘ ಮುದ್ರಾರಾಕ್ಷಸ ’ ವೆಂಬ ನಾಟಕವನ್ನು ಭಾಷಾಂತರಿಸ ತೊಡಗಿದರು. ಅವರ ೧-೨ ಅಂಕಗಳು ಮುಗಿದವು. ಇಷ್ಟರಲ್ಲಿ ಅವರ ಸಹೋದ್ಯೋಗಿಗಳಾದ ರಾ. ಕೊಣ್ಣೂರ ಮತ್ತು ರಾ. ಸಗರ ಎಂಬವರಿಗೆ ಬೇರೆ ಕಡೆಗೆ ವರ್ಗವಾಯಿತು.

ಮುಂದೆ ಅವರಿಬ್ಬರೂ ದೈವ-ದುರ್ವಿಪಾಕದಿಂದ ಕಾಲವಶರಾದರು. ಹೀಗೆ ವಿಘ್ನವು ಒದಗಿತು. ರಾ. ಕೃಷ್ಣರಾವ ಹುನಗುಂದ ಇವರು ಏಕಾಕಿಯಾದ್ದರಿಂದ ಉದಾಸೀನರಾಗಿ ತಮ್ಮ ಲೇಖನವ್ಯವಸಾಯುವನ್ನು ಬಿಟ್ಟುಕೊಟ್ಟರು. ಆದ್ದರಿಂದ ಮುಂದೆ 'ಭಾಷಾಸೇವಕ'ವು ನಡೆಯದಾಯಿತು.

ಈ ಮಾಸಪತ್ರಿಕೆಯಲ್ಲಿ ಬರುತ್ತಿದ್ದ 'ಕುರುಹಿನ ಬಕುಳಹಾರ' ವೆಂಬ ಕಥೆಯನ್ನೇ ಈಗ ಪುನಃ ಅಚ್ಚು ಹಾಕಿಸಿ ಕನ್ನಡವಾಚಕರಿಗೆ ಅರ್ಪಿಸಿದ್ದೇವೆ. ಈ ಪುಸ್ತಕವು ಮುಂಬಯಿ ವಿದ್ಯಾಖಾತೆಯಿಂದ ಲಾಯಬ್ರರಿಗೂ ಇನಾಮಿಗೂ ಮಂಜೂರಾಗಿದೆ. ಇದರಲ್ಲಿಯ ಕಥೆಯು ಕೇವಲಕಾಲ್ಪನಿಕವಾಗಿದೆ. ಆದರೂ ಭವಭೂತಿಯು ಕಾಲದ ಸಮಾಜದ ಸ್ಥಿತಿಯು ಇದರಲ್ಲಿ ಒಡೆದು ಕಾಣಿಸುತ್ತದೆ. ಭವಭೂತಿಯು ಕಾಲಿದಾಸನ ಸಮಕಾಲೀನನಾಗಿರ ಬಹುದು. ಅಥವಾ ಅವನ ತರುವಾಯ ಸ್ವಲ್ಪಕಾಲದಲ್ಲಿಯೇ ಪ್ರಸಿದ್ಧಿಗೆ ಬಂದಿರಬಹುದು, ಎಂದು ಹೇಳಬಹುದು. ಇವನು (೧) ಮಹಾವೀರ ಚರಿತ್ರ, (೨) ಮಾಲತೀಮಾಧವ, (೩) ಉತ್ತರರಾಮಚರಿತ್ರ ಎಂಬ ಮೂರು ನಾಟಕಗಳನ್ನು ಬರೆದಿರುತ್ತಾನೆ. ಇವುಗಳಲ್ಲಿ 'ಉತ್ತರರಾಮ ಚರಿತ್ರ'ವೇ ಶ್ರೇಷ್ಠವಾದದ್ದು. उत्तरे रामचरिते भवभूतिर्विशिष्यते । ಎಂಬ ಉಕ್ತಿಯಿಂದ ಕಾಲಿದಾಸನಿಗಿಂತಲೂ ಭವಭೂತಿಯು ಮೇಲಾದ ನಾಟಕಕಾರನೆಂದು ತರ್ಕಿಸಲಿಕ್ಕೆ ಆಸ್ಪದವಾಗುತ್ತದೆ. ಭವಭೂತಿಯು ಎರಡನೇ ನಾಟಕವಾದ ಮಾಲತೀ ಮಾಧವದಲ್ಲಿ ಶೃಂಗಾರ-ವೀರ-ಕರುಣಾದಿ ನವರಸಗಳು ಪರಿಪೂರ್ಣವಾಗಿರುತ್ತವೆ. ಈ ನಾಟಕಕ್ಕೆ ಪುರಾಣ, ಇತಿಹಾಸಗಳ ಆಧಾರವೇನೂ ಇಲ್ಲ. ಇದು ಕೇವಲ ಕಲ್ಪನೆಯನ್ನೇ ಅವಲಂಬಿಸಿರುವದು. ಈ ನಾಟಕದ ಸಂವಿಧಾನಕವು ಅಷ್ಟು ಹೃದಯಂಗಮವಾಗಿ ರದಿದ್ದರೂ ಕವಿಯ ವರ್ಣನಾಚಾತುರ್ಯವೂ, ಲೇಖನಶೈಲಿಯೂ ಮನೋಹರವಾಗಿವೆ. ಸೃಷ್ಟಿಸೌಂದರ್ಯವನ್ನು ಬಣ್ಣಿಸುವದರಲ್ಲಂತೂ ಕವಿಯ ಕುಶಲತೆಯು ಹಿರಿದಾದದ್ದು. ಪ್ರಾರಂಭಕ್ಕೆ ಈ ನಾಟಕವು ಆ ಕಾಲದಲ್ಲಿ ಜನಪ್ರಿಯವಾಗಲಿಲ್ಲೆಂದು ತೋರುತ್ತದೆ. ಹಾಗೆ ಇರದಿದ್ದರೆ— कालोह्ययं निरवाधिर्विपुलाच पृथ्वी । ಎಂದು ಹೇಳುವ ಪ್ರಸಂಗವು ಆ ಕವಿಗೆ ಬರುತ್ತಿರಲಿಲ್ಲ. ಇರಲಿ, ಕನ್ನಡದಲ್ಲಿ ಈ ಗುಣಗಳು ಎಷ್ಟರಮಟ್ಟಿಗೆ ಸಾಧಿಸಿರುವ ವೆಂಬದನ್ನು ವಾಚಕರೇ ಹೇಳಬೇಕು. ಈ ಕಥೆಯನ್ನು ಒಮ್ಮೆಯಾದರೂ ಕನ್ನಡಿಗರು ಓದದೆ ಇರಬಾರದೆಂದು ಗ್ರಂಥಕರ್ತನ ವಿಜ್ಞಪ್ತಿಯುಂಟು.

ಧಾರವಾಡ,
೨೦ ಮಾರ್ಚ ೧೯೨೧,

ಕೃ. ಶ್ರೀ. ಹುನಗುಂದ,
ಗ್ರಂಥಕರ್ತಾ.

## ಅನುಕ್ರಮಣಿಕೆ.





## ಶುದ್ಧಿ ಪತ್ರಿಕೆ.



| ಪ್ರಸ್ತಾವನೆ. ಪುಟ | ಸಾಲು | ಅಶುದ್ಧ | ಶುದ್ಧ. |
|---|---|---|---|
| ೨ | ೬ | ಅಚು | ಅಚ್ಚು |
| ಮೂಲಗ್ರಂಥ | | | |
| ೨ | ೨೦ | ಸೃಷಿ | ಸೃಷ್ಟಿ |
| ೨ | ೭ | ತುಚ್ಪ | ತುಚ್ಛ |
| ,, | ೨೨ | ಹದವಾದ | ಹದನಾದ |
| ೩ | ೧೦ | ವೆ ಚಿ | ಮೆಚ್ಚಿ |
| ,, | ೧೧ | ಬುದ್ದಿ | ಬುದ್ಧಿ |
| ,, | ೨೭ | ಮಂತ್ರಪಿದ್ದಿ | ಮಂತ್ರಸಿದ್ಧಿ |
| ೧೦ | ೩ | मधुरास्संते | त्ये |
| ೧೨ | ೨೮ | ತುಂಬಿಸುವದಕ್ಕಾಗಿ | ತುಂಬಿಸುವದಕ್ಕಾಗಿ |
| ೧೪ | ೨೨ | ಮಾಲತಿಯನೆಚರ | ಮಾಲತಿಯನ್ನೆಚ್ಚರ |
| ೧೬ | ೫ | ದೊಡದಿರ ವದು | ದೊಡ್ಡದಿರುವದು |
| ೧೬ | ೧೯ | ಉದಯುದಲ್ಲಿ | ಉದರದಲ್ಲಿ |
| ೧೬ | ೧೭ | ಮನೆಬಿಟು | ಮನೆಬಿಟ್ಟು |
| ,, | ೨೬ | ಬೇಜಾರ | ಬೆಜ್ಜರ |
| ,, | ೩೦ | ಯನೊಡಗೊಂಡು | ಯನ್ನೊಡಗೊಂಡು |

| | | | |
|---|---|---|---|
| ೨೩ | ೧೩ | ಇಷರಲ್ಲಿ | ಇಷ್ಟರಲ್ಲಿ |
| ೩೦ | ೧೯ | ಮೋಲ್ಹೊಗಲನ್ನು | ಮೇಲ್ಹೊಗಲನ್ನು |
| ,, | ೨೭ | ಕರಳುಗಳು | ಕರಳುಗಳ |
| ೩೨ | ೧೦ | ಗಡಿಬಿಡಿ | ಗಡಿಬಿಡಿಯಿಂದ |
| ೩೬ | ೬ | ವಿಚಿತ್ರಾಗತೀ | ವಿಚಿತ್ರಾಗತಿಃ |
| ,, | ೧೭ | ಮುದಿವೆಯು | ಮದುವೆಯು |
| ೪೩ | ೧೨ | ಬಗೆ | ಬಗ್ಗೆ |
| ೪೫ | ೧೯ | ಹಿಂದೆ ಹೇಳಿದಂತೆ | ಹಿಂದೆ ಹೇಳಿದಂತೆ? |
| ೪೮ | ೨ | ಹೆಣು | ಹೆಣ್ಣು |
| ೫೧ | ೪ | ಕಷದಿಂದ | ಕಷ್ಟದಿಂದ |
| ,, | ೨೦ | ವರಮಾಲ್ಹಾದ | ಪರಮಾಲ್ಹಾದ |
| ೫೨ | ೧೦ | ಎಷ್ಬ | ಎಷ್ಟು |
| ೫೨ | ೧೦ | ಮುಟಿಗೂ | ಮುಟ್ಟಿಗೂ |
| ೫೪ | ೫ | ವಿವ್ರಲಂಭ | ವಿಪ್ರಲಂಭ |
| ೫೫ | ೮ | ಮುಪನಬಾಧೆ | ಮದನಬಾಧೆಯು |
| ೫೮ | ೨೬ | ಈಗಿನ | ಈಗೀಗ |
| ೫೮ | ೩೦ | ಅಚರಿಗೊಂಡು | ಅಚ್ಚರಿಗೊಂಡು |
| ೬೦ | ೧ | ಸಡುಗೆ | ಸಡುಗಿ |
| ,, | ೨೪ | ಹೆಜೆಯು | ಹೆಜ್ಜೆಯು |
| ೬೧ | ೧೬ | ಮುಗುಳುಗುವದರಿಂದ | ಮುಗುಳುವದರಿಂದ |
| ೬೩ | ೭ | ಎರಿ | ಏರಿ |
| ,, | ೨೯ | ಮೆಯುಲ್ಲ | ಮೈಯುಲ್ಲ |
| ೬೪ | ೧೧ | ಮಾಧವದನ್ನು | ಮಾಧವನನ್ನು |
| ,, | ೧೪ | ಒಯ್ಯರ | ಒಯ್ಯಾರ |
| ,, | ೧೬ | ಬತ್ತಗಳು | ಬಿತ್ತಗಳು |
| ೬೬ | ೨ | ಹಣ್ಣಿನಂತೊ | ಬಣ್ಣದಿಂದೊ |
| ,, | ೨ | ಕಾರ್ಮೊಡವು | ಕಾರ್ಮೋಡವು |
| ,, | ೧೬ | ಕುಸುಮಾರಿ | ಸುಕುಮಾರಿ |
| ,, | ೧೭ | ಏರಳೆಗಂಗಳೆ | ಎರಳೆಗಂಗಳೆ |
| ,, | ೧೮ | ಅಂಗರಾಚಿ | ಅಂಗಲಾಚಿ |
| ೬೮ | ೨೦ | ಕಟ್ಟಾಗಬಾರೆದೇ | ಕಟ್ಟಾಗಬಾರದೇ! |
| ೬೯ | ೩೧ | ಭಗವತೀ | ಭಗವತಿ |
| ,, | ೩೧ | ಗಂಗಾಂಬೀ | ಗಂಗಾಂಬಿಕೇ |
| ೭೧ | ೭ | ದಿಂದ | ವೆಂದು |
| ,, | ೨೦ | ಹಾರವನ್ನು | ಬಕುಳಹಾರವನ್ನು |
| ೭೭ | ೨೮ | ಮನಸ್ಸಿನಲ್ಲಿಂದುಕೊಂಡು | ಮನಸ್ಸಿನಲ್ಲಂದುಕೊಂಡು |

# ಭವಭೂತಿಕವಿಯ ಮಾಲತೀಮಾಧವನೆಂಬ ಮಹಾನಾಟಕದ ಕಥಾರೂಪವು.

## ೧ ನೇ ಅಧ್ಯಾಯವು.

ಪ್ರಾಚೀನಕಾಲದಲ್ಲಿ ದಕ್ಷಿಣದೇಶದೊಳಗೆ ವಿದರ್ಭ (ವರ್‍ಹಾಡ) ವೆಂಬ ಹೆಸರಿನ ವಿಸ್ತಾರವಾದ ದೇಶವಿತ್ತು. ಅದರಲ್ಲಿ ಅನೇಕ ಸಣ್ಣ ಸಣ್ಣ ವಿಭಾಗಗಳಿದ್ದು ಅವುಗಳನ್ನು ಬೇರೆ ಬೇರೆ ಮಾಂಡಲಿಕರೂ ಪಾಳೆಯಗಾರರೂ ಆಳುತ್ತಿದ್ದರು. ಈ ವಿಸ್ತಾರವಾದ ದೇಶದ ಮುಖ್ಯಪಟ್ಟಣವು ಕುಂಡಿನಪುರವೆಂಬದು ಪ್ರಸಿದ್ಧವಿತ್ತು. ಅದಲ್ಲದೆ ಪದ್ಮಪುರವೇ ಮೊದಲಾದ ಹಲವು ಚಿಕ್ಕ ದೊಡ್ಡ ಪಟ್ಟಣಗಳಿಂದ ಆ ಪ್ರದೇಶವು ಕಂಗೊಳಿಸುತ್ತಿರುವದು. ಸೆಂಪುವಡೆದಿದ್ದ ಆ ರಾಜ್ಯವು ಸಕಲ ಸಂಪತ್ತನ್ನು ಹೊಂದಿ, ಪರರಾಯರ ಅಳುಕಿಲ್ಲದೆ, ಪ್ರತಿದಿನವೂ ಏಳಿಗೆಯಲ್ಲಿಯೇ ಇತ್ತು. ಪ್ರಜೆಗಳಾದರೂ ರಾಜೋಪದ್ರವವಿಲ್ಲದೆ ನಿರಾತಂಕವಾದ ಸುಖೋಪಭೋಗದಲ್ಲಿಯೂ, ಏಕಚಿತ್ತದಿಂದ ಜ್ಞಾನವನ್ನು ಗಳಿಸುವದರಲ್ಲಿಯೂ ಹೊತ್ತುಗಳೆಯುವರು. ವಿಶೇಷವಾಗಿ ಆ ರಾಜ್ಯವು ಅಖಂಡಶಾಂತಿಯನ್ನು ಅನುಭೋಗಿಸುತ್ತಿರುವದರಿಂದ ಅದು ಆರುಶಾಸ್ತ್ರಗಳಿಗೂ ಅರವತ್ತುನಾಲ್ಕು ಕಲೆಗಳಿಗೂ ತವರುಮನೆಯಾಗಿತ್ತು. ಕುಂಡಿನಪುರದಲ್ಲಂತೂ ವಾಗ್ದೇವಿಯು ತನಗೆ ಆರೂ ಸರಿಯಿಲ್ಲೆಂಬ ಹೆಮ್ಮೆಯಿಂದ ಆರ ಸಡ್ಡೆಯೂ ಇಲ್ಲದೆ ಮೆರೆಯುವಳು. ರಮ್ಯವಾದ ಆ ಪುರದಲ್ಲಿ ಒಂದು ಬಹು ಹೆಸರಾದ ವಿದ್ಯಾಲಯುವಿತ್ತು. ಅಲ್ಲಿ ದೊರೆಯುವ ಜ್ಞಾನಾಮೃತವನ್ನು ಮನದಣಿಯುವಂತೆ ಪಾನಮಾಡಿ. ಎಂದು ಸಂತೃಪ್ತಿಯನ್ನು ಪಡುವೆವು, ಎಂಬ ಲವಲವಿಕೆಯಿಂದ ದೇಶಾಂತರದಿಂದ ಮನೆಮಾರು ತೊರೆದು ಬಂದ ವಿದ್ಯಾರ್ಥಿಗಳ ಸಂದಣಿಯಿಂದ ಅಲ್ಲಿ ಕಾಲಿಡಲಿಕ್ಕೆ ಇಂಬು ಇಲ್ಲದೆ ಹೋಯಿತು.

ಆ ವಿದ್ಯಾರ್ಥಿಗಳಲ್ಲಿ ದೇವರಾತ, ಭೂರಿವಸು ಎಂಬೀರ್ವರು ಬ್ರಾಹ್ಮಣ ಕುಮಾರರು ವ್ಯಾಸಂಗದ ನಿಮಿತ್ತದಿಂದ ಹಗಲಿರುಳು ಒಂದೇ ಕಡೆಯಲ್ಲಿ ವಾಸಮಾಡುತ್ತಿದ್ದುದರಿಂದಲೂ, ಸುಶೀಲರಾಗಿದ್ದುದರಿಂದಲೂ, ಜೀವದ ಗೆಳೆಯರಾಗಿ ಒಬ್ಬನ ಮಾತನ್ನು ಮತ್ತೊಬ್ಬನು ಮೀರಿನಡೆಯದೆ ಆವಾಗಲೂ ಸಹವಾಸಪ್ರಿಯರಾಗಿದ್ದರು. "ಸಮಾನಶೀಲವ್ಯಸನೇಷುಸಖ್ಯಂ''.

ಆ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ಚಿಕ್ಕತನದಲ್ಲಿಯೇ ಮದುವೆಮಾಡದೆ, ಅವರನ್ನು ಪ್ರೌಢರಾಗುವವರೆಗೂ ವಿದ್ಯಾಭ್ಯಾಸದಲ್ಲಿ ತೊಡಗಿಸುವ ಕ್ರಮವಿತ್ತು. ಈಗಿನಂತೆ ಬಾಲ್ಯದಲ್ಲಿಯೇ ಮದುವೆಯೆಂಬ ಸಂಕಲೆಯನ್ನು ಕಟ್ಟಿ ಜ್ಞಾನದ ಗತಿಯನ್ನೇ ನಿಲ್ಲಿಸಿ, ಹೆಂಗಸರನ್ನು ದನಗಳಂತೆ ಲಕ್ಕಿಸುವ ಕಾಡನಡತೆಯು ಇನ್ನೂ ನೆಲೆಗೊಂಡಿದ್ದಿಲ್ಲ. ತಮ್ಮ ತಮ್ಮ ವಿದ್ಯಾಭ್ಯಾಸದ ಕ್ರಮವು ತೀರಿದ ಬಳಿಕ ತಕ್ಕವರನನ್ನು ಮದುವೆಯಾಗಿ ಹಲವರು ಸಂಸಾರಸುಖದಲ್ಲಿಯೂ, ಸಂಸಾರವನ್ನು ಸೇರದ ಕೆಲವರು ಯೋಗಿನಿಯರಾಗಿ ಐಹಿಕ ಸುಖಗಳನ್ನು ತುಚ್ಛಮಾಡಿ ಪರಮಾತ್ಮನ ಚಿಂತನೆಯಲ್ಲಿಯೂ, ನಿಮಗ್ನರಾಗಿ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳುವರು. ಬೌದ್ಧಮತದ ಬಿಂಕವು ಮುಕ್ಕಾಲು ಪಾಲು ಹಿಮ್ಮೆಟ್ಟಿದ್ದರಿಂದ ಬ್ರಾಹ್ಮಣರೂ ಬೌದ್ಧರೂ ಒಬ್ಬರಿಗೊಬ್ಬರು ಹಗೆತನವನ್ನು ಬಗೆಯದೆ ಸಲೆಸಲುಗೆಯಿಂದ ಒಕ್ಕಟ್ಟಾಗಿ ನಡೆಯುತ್ತಿದ್ದರು. ಎಂದಿನಂತೆ ಉಭಯಮತದವರಿಗೆ ಹಗರಣವಿಲ್ಲದೆ, ಬೌದ್ಧರಿಗೆ ಬ್ರಾಹ್ಮಣ್ಯವನ್ನು ಕೈಕೊಳ್ಳಲಿಕ್ಕೂ ವೇದಪಾಠಕರಿಗೆ ಅರ್ಹತ್ ಭಕ್ತರಾಗಲಿಕ್ಕೂ ಏನೂ ಎಡರಿದ್ದಿಲ್ಲ.

ಮೇಲೆ ಹೇಳಿದ ಕುಂಡಿನಪುರದ ಪಾಠಶಾಲೆಯಲ್ಲಿ ಹೆಣ್ಣುಗಂಡೆಂಬ ತಾರತಮ್ಯವಿಲ್ಲದೆ ಎಲ್ಲರಿಗೂ ಸಮನಾಗಿ ವಿದ್ಯೆ ದೊರೆಯುತ್ತಿತ್ತು. ಭೂರಿವಸು ದೇವರಾತರಿವರಿರುವ ಕಾಲದಲ್ಲಿಯೇ ಕಾಮಂದಕಿ–ಸೌದಾಮಿನಿ ಎಂಬೀರ್ವರು ಬಾಲಿಕೆಯರು ಅದೇ ಶಾಲೆಯಲ್ಲಿ ಓದುತ್ತಿದ್ದರು. ಭೂರಿವಸು ದೇವರಾತರಲ್ಲಿದ್ದಷ್ಟು ಗೆಳೆತನವು ಈ ಬಾಲಿಕೆಯರಲ್ಲಾದರೂ ಇತ್ತು. ಆವದಾದರೊಂದು ನಿಮಿತ್ತದಿಂದ ನಿತ್ಯದಲ್ಲಿ ಒಂದೇ ಸ್ಥಳದಲ್ಲಿರುವದರಿಂದಲೂ, ಒಂದೇಕಡೆಯಲ್ಲಿ ಊಟಉಡಿಗೆಯನ್ನು ಮಾಡುವದರಿಂದಲೂ, ಪ್ರಾಯದ ಸ್ತ್ರೀಪುರುಷರ ಮನಸು ವಿಕಾರಗೊಳ್ಳುವದು ಲೋಕದಲ್ಲಿ ವಾಡಿಕೆಯಾದರೂ, ಈ ನಾಲ್ವರಲ್ಲಿಯ ಸ್ನೇಹಭಾವದ ಕುರುಹುಗಳು ಲೋಕವಿಲಕ್ಷಣವಾಗಿ ತೋರಿದವು; ಇವರೊಳು ಬಳೆದಿರುವ ಬಂಧುವಾತ್ಸಲ್ಯವು ಅತ್ಯಂತ ನಿಕಟವಾಗಿರುವದರಿಂದಲೋ ಏನೋ, ಮೂಜಗದಲ್ಲಿಯೂ ಅಜಿಂಕ್ಯನಾದ ಮನ್ಮಥನ ಹದವಾದ ಕೂರಂಬುಗಳಿಗೆ ಸಹ ಒಳನುಗ್ಗಲಿಕ್ಕೆ ಎಡೆ ಸಿಗಲಿಲ್ಲ. ಈತೆರದಲ್ಲಿ ಈ ನಾಲ್ವರ ಸಖ್ಯವು ದಿನೇದಿನೇ ಹೆಚ್ಚಿ, ಒಬ್ಬರನ್ನೊಬ್ಬರು ಅಗಲದೆ ಇರುವಲ್ಲಿ ಒಂದುದಿನ ಭೂರಿವಸು ದೇವರಾತರು, ವಿನೋದ ಸಂಭಾಷಣೆಯನ್ನಾಡುವಾಗ ತಮ್ಮೊಳಗಣ ಋಣಾನುಬಂಧವು ಕಡಿದುಹೋಗದೆ ನಿರಂತರ ಹೇಗೆ ಸಾಗೀತೆಂಬ ಆಲೋಚನೆಗೆ ಉಪಾಯವನ್ನು ಅರಿಯದೆ ಇರಲು, ಆಗ ಕಾಮಂದಕಿಯು 'ನಿಮ್ಮಲ್ಲಿ ಜನಿಸಿದ ಸಂತತಿಗಳ ಶರೀರಸಂಬಂಧ ಮಾಡಬಹುದು' ಎಂದು ನುಡಿದಳು. ಇದೇ ಒಳ್ಳೇ ಉಪಾಯವೆಂದು ಎಲ್ಲರೂ ತಲೆದೂಗಿ ಒಡಂಬಟ್ಟ ಬಳಿಕ ಹೀಗೆಯೇ ಮಾಡುವದೊಳಿತೆಂದು ನಿಶ್ಚಯಿಸಿ ಕಾಮಂದಕಿ ಸೌದಾಮಿನಿಯರ ಸಾಕ್ಷಿಯಾಗಿ ಭೂರಿವಸು ದೇವರಾತರು ಪರಸ್ಪರ ಒಪ್ಪಿಗೆಯಿಂದ ಪ್ರತಿಜ್ಞೆಯನ್ನು ಗೈದರು.

ಮುಂದೆ ಹಲವು ದಿನಗಳು ಹೀಗೇಯೇ ಗತಿಸಿದ ನಂತರ ಈ ನಾಲ್ವರು ಪಾಠಶಾಲೆಯಲ್ಲಿಯ ಅಭ್ಯಾಸವನ್ನು ಮುಗಿಸಿ, ತಮ್ಮ ತಮ್ಮ ಮುಂದಿನ ವಿಚಾರದಲ್ಲಿ ತೊಡಗಿದರು. ಭೂರಿವಸುದೇವರಾತರು ನಾಲ್ಕು ಮಂದಿಯಲ್ಲಿ ತಮ್ಮ ವಿದ್ವತ್ತೆಯ ವರ್ಚಸ್ಸು ಹೇಗೆ ಬಿದ್ದೀತು? ಲೌಕಿಕದಲ್ಲಿ ತಾವು ಹೇಗೆ ಹೆಸರುವಾಸಿಯಾಗುವೆವು? ಎಂಬ ಚಿಂತೆಯಲ್ಲಿಯೇ ಮನತೊಡಕಿಸಿದರು. ಕಾಮಂದಕಿ ಸೌದಾಮಿನಿಯರಂತೂ ಬೌದ್ಧಮತವನ್ನು ಕೈಕೊಂಡು, ಪ್ರಪಂಚದ ಸುಖಕ್ಕೆ ವಿಮುಖರಾಗಿ, ಏಕೋಭಾವದಿಂದ ನಿರ್ವಾಣಪರರಾಗಿ, ಪರಹಿತವನ್ನೂ ಭೂತದಯೆಯನ್ನೂ ಜನರಿಗೆ ಸಾರುತ್ತ, ಕೈಲಾದಮಟ್ಟಿಗೆ ಸ್ವತಃ ನೆರವೇರಿಸುತ್ತ ಮಠಗಳಲ್ಲಿ ನಿಶ್ಚಿಂತರಾಗಿ ಕಾಲಕ್ರಮಣ ಮಾಡುವರು. ಬರಬರುತ್ತ ಭೂರಿವಸು ದೇವರಾತರ ಖ್ಯಾತಿಯು ನಾಲ್ದೆಸೆಯಲ್ಲಿ ಹಬ್ಬಿ ವಿದರ್ಭದೇಶವನ್ನಾಳುವ ಅರಸರುಗಳ ಕಿವಿವರೆಗೂ ತಲುಪಿತು. ವಿದರ್ಭಪತಿಯು ದೇವರಾತನ ಜಾಣ್ಮೆಗೆ ಮೆಚ್ಚಿ ತನ್ನ ಮಂತ್ರಿಪದವನ್ನು ಅವನಿಗೆ ಅರ್ಪಿಸಿದನು. ಅವನಾದರೂ ಬುದ್ಧಿಕೌಶಲ್ಯದಿಂದ ಒಂದು ಕಡೆ ತನ್ನೊಡೆಯನ ಚಿತ್ತವನ್ನು ಅನುಸರಿಸಿ ಮತ್ತೊಂದು ಕಡೆ ಪ್ರಜೆಗಳನ್ನಾದರೂ ಸಮಾಧಾನಗೊಳಿಸಿ ಬಹು ಜಾಗ್ರತೆಯಿಂದ ರಾಜ್ಯಸೂತ್ರವನ್ನು ನಡಿಸಿದನು. ಇತ್ತಲಾ ಭೂರಿವಸುವಾದರೂ ಪದ್ಮಪುರವನ್ನಾಳುವವನಿಗೆ ಬೇಕಾಗಿ ಅವನ ಆಗ್ರಹದಿಂದ ಸಚಿವನಾಗಲಿಕ್ಕೆ ಒಪ್ಪಿಕೊಂಡನು. ಈ ಮೇರೆಗೆ ಪಾಠಶಾಲೆಯಲ್ಲಿಯ ಬಾಲಕರು ತಮ್ಮ ಚುರುಕುತನದಿಂದ ಒಳ್ಳೇ ಘನತೆಗೇರಿ ಸತಿಯರೊಡನೆ ಕಡು ಒಲುಮೆಯಿಂದ ಸಂಸಾರಮಾಡುತ್ತಿರಲು, ದೇವರಾತನ ಮಡದಿಯು ಸುದಿನದಲ್ಲಿ ಬಸುರಾಗಿ ನವಮಾಸ ತುಂಬಿ ಸುಮುಹೂರ್ತದಲ್ಲಿ ಗಂಡು ಶಿಶುವನ್ನು ಹೆತ್ತಳು. ಆಶಿಶುವು ಬಿದಿಗೆಯ ಚಂದಿರನೋಪಾದಿಯಲ್ಲಿ ದಿನದಿನಕ್ಕೆ ಬಳೆಯುತ್ತ ಮಾಧವನೆಂಬ ಹೆಸರನ್ನು ಹೊಂದಿ ಚೌಲೋಪನಯನಾದಿ ಬ್ರಹ್ಮಕರ್ಮದೀಕ್ಷೆಯಿಂದ ಪೂತನಾಗಿ ಆಯಾ ವಿದ್ಯೆಯಲ್ಲಿ ನಿಪುಣನಾದನು. ಮಾಧವನು ಜನಿಸಿ ಕೆಲದಿನವಾದಬಳಿಕ ಪದ್ಮಪುರದಲ್ಲಿ ಭೂರಿವಸುವಿಗೂ ಹೆಣ್ಣುಕೂಸು ಹುಟ್ಟಿ, ಮಾಲತಿಯೆಂಬ ಹೆಸರು ಪಡೆದು ಸಲಕ್ಷಣವಾದ ಅವಯವಗಳಿಂದ ಅಪ್ಸರೆಯರನ್ನು ಸಹ ಜರಿಯುವ ಸೌಂದರ್ಯಯುಕ್ತಳಾಗಿ ಅಬಲೆಯರಿಗೆ ಒಪ್ಪುವ ವಿದ್ಯೆಯನ್ನೂ ಕಲೆಗಳನ್ನೂ ಕಲಿತು ತಂದೆತಾಯಿಗಳ ಹರುಷಗಡಲನ್ನುಕ್ಕೇರಿಸುವ ಚಂದ್ರೋದಯದಂತೆ, ತಾರುಣ್ಯದ ಸೊಬಗಿನಿಂದ ಎಸೆದಳು.

ಕಾಮಂದಕೀ ಸೌದಾಮಿನಿಯರು, ವಿರಕ್ತರಾದದ್ದು ಮೇಲೆ ಹೇಳಿದುವದಷ್ಟೇ; ಸೌದಾಮಿನಿಯು ಕಾಪಾಲಿಕವ್ರತವನ್ನವಲಂಬಿಸಿ ಮಂತ್ರಸಿದ್ಧಿಯನ್ನು ಪಡೆದು ಶ್ರೀಪರ್ವತವೆಂಬಲ್ಲಿ ವಾಸಮಾಡುತ್ತಿದ್ದಳು. ಕಾಮಂದಕಿಯು ತಮ್ಮ ಸನ್ನಿಧಿಯಲ್ಲಿರಬೇಕೆಂಬ ಭೂರಿವಸುದೇವರಾತರ ಆಗ್ರಹಕ್ಕೆ ಒಳಪಡದೆ, ಪದ್ಮಪುರದಲ್ಲಿ ಒಂದು ವಿಹಾರವನ್ನು ಕಟ್ಟಿಸಿ ಓರ್ವ ಶಿಷ್ಯಳೊಡನೆ ಕಾಲಕಳೆಯುತ್ತಿದ್ದಳು. ಕುಂಡಿನಪುರದಲ್ಲಿ ನ್ಯಾಯಶಾಸ್ತ್ರದ ಅಭ್ಯಾ

ಸವು ಚನ್ನಾಗಿ ಆಗದಿರುವದರಿಂದ, ಮಕರಂದನೆಂಬ ಕೆಳೆಯನನ್ನೂ ಕಲಹಂಸನೆಂಬ ಸೇವಕನನ್ನೂ ಜತೆಮಾಡಿ ತನ್ನ ಮಗನಾದ ಮಾಧವನನ್ನು ತರ್ಕಶಾಸ್ತ್ರವನ್ನೋದುವದಕ್ಕೆ ದೇವರಾತನು ಪದ್ಮಪುರಕ್ಕೆ ಕಳುಹಿದನು. ಪದ್ಮಪುರಕ್ಕೆ ಬಂದನಂತರ ಮಾಧವನು ನಿತ್ಯದ ಅಭ್ಯಾಸಮಾಡಿ ಮಿಕ್ಕವೇಳೆಯಲ್ಲಿ ಮಕರಂದನೊಡಗೊಂಡು ತನ್ನ ತಂದೆಯ ಸ್ನೇಹಿತಳಾದ ಕಾಮಂದಕಿಯ ವಿಹಾರಕ್ಕೆ ಹೋಗಿ ತುಸು ಹೊತ್ತು ಯೋಗಕ್ಷೇಮದ ಮಾತುಗಳನ್ನಾಡುವನು.

ಪದ್ಮಪುರದಲ್ಲಿ ಮದನೋದ್ಯಾನವೆಂಬ ಬಹು ರಮ್ಯವಾದ ಒಂದು ಉಪವನವಿರುವದು ಅಲ್ಲಿ ಅನೇಕ ವಿಧದ ಪೂಗಾಯಿಗಳಿಂದೊಪ್ಪುವ ಚಿಕ್ಕದೊಡ್ಡ ಮರಗಳು ತಮ್ಮ ಪರಿಮಳವನ್ನು ಸುತ್ತಲೂ ಬೀರಿ ಪೌರಜನರನ್ನು ಮೋಹಗೊಳಿಸುವವು. ಎಷ್ಟೋ ಜನರು ಹಗಲೆಗಲ್ಲ ದುಡಿದು ಬಸವಳಿದು ನಸುಗೆಂಪಿನ ಸಂಜೆಯಲ್ಲಿ ಬೇಸರಗಳಿಯುವದಕ್ಕೂ, ಕೆಲವರು ಎಳೆವಳಿರಿನ ನೆಳಲಲ್ಲಿ ಕುಳಿತು ಸುಳಿಗಾಳಿಗೆ ಮೈಯೊಡ್ಡಿ ನಲಿದಾಡುವದಕ್ಕೂ, ಅಲ್ಲಿ ಬಂದು ಅರಗಳಿಗೆಯಾದರೂ ವಿಶ್ರಮಿಸದೇ ಇರರು. ಹೆರವರಂತೆ ಮಾಧವನಾದರೂ ಕಾಮಂದಕಿಯ ಮಠದಿಂದ ಹೊರಟು ಮಕರಂದನಗೂಡ ಸ್ವಲ್ಪ ಅಲ್ಲಲ್ಲಿ ತಿರುಗಾಡಿ ಮದನೋದ್ಯಾನದ ಚಂದವನ್ನವಲೋಕಿಸಿ ಆನಂದಪಟ್ಟು ಮನೆಗೆ ಬರುವನು.

ಕಾಮಂದಕಿಯು ವಿರಕ್ತಳಾಗಿದ್ದರೂ ಭೂರಿವಸುದೇವರಾತರ ಮೇಲಿನ ಬಂಧು ಪ್ರೀತಿಯಿಂದ ಅವರು ಪೂರ್ವದಲ್ಲಿ ಮಾಡಿದ ಪ್ರತಿಜ್ಞೆಯನ್ನು ನೆನಪಿಗೆ ತಂದು ಅದು ಹೇಗೆ ಕೈಗೂಡುವದೆಂಬ ಹಂಬಲಿಕೆಯಲ್ಲಿಯೇ ಇದ್ದಳು. ಒಂದುದಿನ ಶಿಷ್ಯಳಾದ ಅವಲೋಕಿತೆಯೆಂಬವಳನ್ನು ಬಳಿಯಲ್ಲಿ ಕರಿಸಿ ಈ ಪ್ರಸ್ತಾಪವನ್ನು ತೆಗೆಯಲು:—

**ಅವಲೋಕಿತೆಯು**—ತಾಯೀ, ಈ ಕಾರ್ಯದ ಬಗ್ಗೆ ನಿಮ್ಮ ಮನದ ದುಗುಡವು ಬಹಳ ಇದ್ದಂತೆ ತೋರುತ್ತದೆ. ಹರಕ ಕೋರಿಯನ್ನು ಹೊದ್ದು, ತಿರುಪದನ್ನದ ಮೇಲೆ ಜೀವಹಿಡಿದುಕೊಂಡಿರುವ ನಿಮ್ಮಂಥವರನ್ನು ಭೂರಿವಸುವು ಇಂಥ ಗೋಜಿನ ಕೆಲಸಕ್ಕೆ ಹಚ್ಚಿದ್ದು ಬಹು ಸೋಜಿಗವು. ನೀವಾದರೂ ಸಂಸಾರದ ನಿರ್ಬಂಧವನ್ನು ಲೆಕ್ಕಿಸದೆ ಇದರಲ್ಲಿ ಮನಸುಹಾಕಿದ್ದು ಹೆಚ್ಚಿನದೇ ಸರಿ.

**ಕಾಮಂದಕಿಯು**— ಮಗಳೇ, ಹಾಗಲ್ಲ. ಭೂರಿವಸುವು ನನ್ನನ್ನು ಇಂಥ ನಂಬಿಕೆಯ ಕೆಲಸದಲ್ಲಿ ತೊಡಕಿಸಿದ್ದು, ನನ್ನ ಮೇಲಿನ ಮಮತೆಯ ಫಲವು. ಆದುದರಿಂದ ಜೀವದ ಪರಿವೆ ಇಡದೆ ಈ ಕಾರ್ಯವನ್ನು ಹೇಗಾದರೂ ಕೊನೆಗಾಣಿಸಿದೆನೆಂದರೆ ಕೃತಕೃತ್ಯಳಾಗುವೆನು. ಮೊದಲು ವಿದ್ಯಾಸಂಪಾದನೆಯೋಸುಗ ನಾವೆಲ್ಲರು ಕೂಡಿದ್ದ ಸಂಗತಿಯನ್ನು ನೀನೇನು ಅರಿತಿಲ್ಲವೇ? ಆಗಲೇ ಭೂರಿವಸುದೇವರಾತರು ತಮ್ಮ ಅಪತ್ಯ ಸಂಬಂಧವನ್ನು ಅವಶ್ಯವಾಗಿ ಮಾಡಬೇಕೆಂದು ನಮ್ಮೆಲ್ಲರ ಸಮಕ್ಷ ವಹಿಸಿಕೊಂಡಿರುವರು. ಈ ಹೂಣಿಕೆಯ ಜ್ಞಾಪಕವನ್ನು ಭೂರಿವಸುವಿಗೆ ಮಾಡಿಕೊಡಬೇಕೆಂತಲೂ, ತನ್ನ ತನಯನ

ಸುಗುಣಗಳನ್ನು ಎಲ್ಲರಿಗೆ ತೋರ್ಪಡಿಸಬೇಕೆಂತಲೂ, ನ್ಯಾಯಶಾಸ್ತ್ರಾಧ್ಯಯನದ ನೆವದಿಂದ ದೇವರಾತನು ಮಾಧವನನ್ನು ಕುಂಡಿನಪುರದಿಂದ ಪದ್ಮಪುರಕ್ಕೆ ಕಳುಹಿಸಿಕೊಟ್ಟಿದ್ದು ಸರಿಯೇ; ಆದರೆ ಅಂತಃಪುರದ ಹಾಸ್ಯಗಾರನಾದ ನಂದನನೆಂಬವನು ದೊರೆಯ ಮಧ್ಯಸ್ಥಿಯಿಂದ ಮಾಲತಿಯನ್ನು ಬಯಸುತ್ತಾನೆ. ದೊರೆಗಳ ಸಮಕ್ಷ ಇಲ್ಲೆಂದರೆ ಮುನಿಸಿಗೆ ಮಾತ್ರ ಕಾರಣವಾಗುವದೆಂದು ಅರಿತು ಜಾಣನಾದ ಭೂರಿವಸುವು, 'ಮಹಾಸ್ವಾಮಿ, ತಮ್ಮ ಮಗಳನ್ನು ಪ್ರಭುಚಿತ್ತಕ್ಕೆ ತೋಚಿದವರಿಗೆ ಕೊಡಬಹುದು. ಎಂದು ದ್ವಿರುಕ್ತಿಯನ್ನಾಡಿ ಲೇಸು ಮಾಡಿರುವನು. ಆದುದರಿಂದ ಕಳ್ಳ ಮದುವೆಯನ್ನುಮಾಡಿಬಿಡುವದೇ ಚತುರೋಪಾಯವು. ಇದೇ ಉದ್ದೇಶದಿಂದ ಅಮಾತ್ಯನು ಮಾಧವನ ಹೆಸರು ಸಹ ಗೊತ್ತಿಲ್ಲದವನಂತೆ ಸುಮ್ಮನೆ ಇರುವನು. ವಿಶೇಷವಾಗಿ ಮಾಲತೀಮಾಧವರು ಇನ್ನೂ ಚಿಕ್ಕವರು; ಈ ಗುಟ್ಟನ್ನು ತಿಳಿಯಗೊಟ್ಟರೆ ಅವರ ಹೆಡ್ಡತನದಿಂದ ಎಲ್ಲ ಹೊರಬಿದ್ದೀತೆಂಬ ಅಂಜಿಕೆಯಿಂದ ಅವರಿಂದ ಸಹ ಇದನ್ನು ಬಚ್ಚಿಡುವದೇ ಒಳ್ಳೇದು. ಹಾಗೂ ಮಾಲತೀಮಾಧವರ ಪರಸ್ಪರ ಪ್ರೇಮವು ತನ್ನಿಂದತಾನೇ ಬಳೆಯುತ್ತಿರುವದು, ಎಲ್ಲರಿಗೂ ಶ್ರುತವಿರುವದು. ಇದು ಒಂದುಬಗೆಯಿಂದ ನಮಗೆ ಅನುಕೂಲಿಸಿದ್ದೇ ಸರಿ. ಏಕೆಂದರೆ ಈ ನೆವದಿಂದ ದೊರೆಗಳನ್ನೂ ನಂದನನನ್ನೂ ಅನಾಯಾಸವಾಗಿ ಮೋಸಗೊಳಿಸಬಹುದು. ಲೋಕದೊಳಗೆ ಜಾಣರಾದವರು ವ್ಯವಹಾರದಲ್ಲಿ ಸ್ವಾಭಾವಿಕವಾಗಿ ವರ್ತಿಸುವಂತೆ ವರ್ತಿಸಿ, ತಮ್ಮ ಗುಟ್ಟನ್ನು ಎಳ್ಳಷ್ಟಾದರೂ ಪ್ರಕಟಮಾಡದೆ, ಒಳಗಿಂದೊಳಗೇ ಹಂಚಿಕೆಯಿಂದ ಸ್ವಾರ್ಥವನ್ನು ಸಾಧಿಸಿಕೊಂಡು, ಏನೂ ಅರಿಯದಂತೆ ತಿರುಗಿ ತಟಸ್ಥರಾಗುವರು."

ಅವಲೋಕಿತೆಯು — "ನಾನಾದರೂ ನಿಮ್ಮ ಅಪ್ಪಣೆಯ ಮೇರೆಗೆ ಮಾಧವನನ್ನು ಅಮಾತ್ಯಮಂದಿರದೆದುರಿನ ರಾಜಬೀದಿಯಲ್ಲಿ ತಿರುಗಾಡಿಸುತ್ತಲಿದ್ದೇನೆ. ಈಹೊತ್ತು ಮದನೋದ್ಯಾನದಲ್ಲಿ ಮಹೋತ್ಸವವಿರುವದನ್ನರಿತು ನಾನು ಮಾಧವನನ್ನು ಬೆಳಿಗ್ಗೆ ಅಲ್ಲಿಯ ಕೌತುಕವನ್ನು ನೋಡುವದಕ್ಕೋಸ್ಕರ ಕಳುಹಿಸಿರುತ್ತೇನೆ. ಮಾಲತಿಯಾದರೂ ಅಲ್ಲಿ ಹೋಗುವದು ಖಂಡಿತವು; ಅಂದಬಳಿಕ ಅವರೀರ್ವರ ಸಂದರುಶನವು ತಾನೇ ಒದಗಿ ಬರುವದೆಂಬದಕ್ಕೆ ಸಂದೇಹವಿಲ್ಲ.

ಕಾಮಂದಕಿಯು — "ಮಗಳೇ ಒಳಿತು ಮಾಡಿದೆ. ಇಂದು ಮಾಲತಿಯ ಮುಖಚಂದ್ರಮನನ್ನು ಕಂಡು ಮಾಧವನ ಮೊಗದಾವರೆಯು ಅರಳುವದು. ಅಹಹ! ಪರಸ್ಪರರಿಗನುರೂಪವಾದ ಗುಣಲಾವಣ್ಯಗಳಿಂದೊಪ್ಪುವ ಇಂಥ ಜತೆಯನ್ನು ನಿರ್ಮಿಸಿದವನ ಜಾಣತನವೆಷ್ಟೋ! ಇಷ್ಟು ಕಷ್ಟಪಟ್ಟದ್ದರ ಫಲವಾದರೂ ಬ್ರಹ್ಮನಿಗೆ ಆಗಲಿ. ಆದರೆ ಇಕೋ! ಮಾಲತಿಯು ತುಸು ಎಳೆಮನದವಳು; ಆದುದರಿಂದ ಈ ಕೆಲಸದಲ್ಲಿ ಕಡು ಎಚ್ಚರಿಕೆಯಿಂದ ನಡೆಯುತಕ್ಕದ್ದು; ಮಾಲತಿಯ ದಾಸಿಯಾದ ಲವಂಗಿಕೆಯಾದರೂ ಹೇಳುತ್ತಿದ್ದಳೇನಂದರೆ:—ಮಾಲತಿಯು ತನ್ನ ಉಪ್ಪರಿಗೆಯ ಕಿಟಕಿಯೊಳಗಿಂದ ರಾಜಬೀದಿ

ಯಲ್ಲಿ ತಿರುಗಾಡುವ ಕಾಮರೂಪಿಯಾದ ಮಾಧವನನ್ನು ನೋಡಿನೋಡಿ, ರತಿಯಂತೆ ಅತಿ ಉತ್ಸುಕಳಾಗಿ ಸೊರಸೊರಗಿ ಬೆಂಡಾಗಿರುವಳು; ಏಳು, ಸ್ವಲ್ಪ ವಿಶ್ರಮಿಸಿ ಮಾಧವನ ಸುದ್ದಿಯನ್ನು ತಿಳಿದುಕೊಂಡು ಮಾಲತಿಯ ಕಡೆಗೆ ಹೋಗುವ; ನಡೆ.'' ಹೀಗೆಂದು ಕಾಮಂದಕಿ ಅವಲೋಕಿತೆಯರು ವಿಶ್ರಮಿಸುವದಕ್ಕಾಗಿ ಒಳಮನೆಯನ್ನು ಹೊಕ್ಕರು.

ಇತ್ತಲಾ ಮಾಲತಿಯು ಲವಂಗಿಕೆಯು ಹೇಳಿಕೆಯಂತೆ ಮಾಧವನನ್ನು ನೋಡಿದಂದಿನಿಂದ ಕಾಮಪೀಡಿತಳಾಗಿ, ತನ್ನ ವಿನೋದದ ಸಲುವಾಗಿ ಮಾಧವನ ಚಿತ್ರವನ್ನು ಬರೆದಿಟ್ಟಿದ್ದಳು. ಅದನ್ನು ಲವಂಗಿಕೆಯು ತನ್ನ ಗೆಳತಿಯಾದ ಮಂದಾರಿಕೆಯೆಂಬ ಮತ್ತೊಬ್ಬ ದಾಸಿಯ ಕೈಯಲ್ಲಿ ಕೊಟ್ಟಿದ್ದಳು. ಮಾಧವನ ಸೇವಕನಾದ ಕಲಹಂಸನು ಮಂದಾರಿಕೆಯ ಪ್ರೀತಿಪಾತ್ರನಾದುದರಿಂದ ಆ ಚಿತ್ರಪಟವು ಮಂದಾರಿಕೆಯ ದ್ವಾರದಿಂದ ಕಲಹಂಸನ ಸ್ವಾಧೀನವಾಗಿತ್ತು. ಆ ಪಟವನ್ನು ಮಾಧವನ ದೃಷ್ಟಿಗೆ ಕೆಡಹಿ ಅವನನ್ನು ಆನಂದಪಡಿಸಬೇಕೆಂಬ ಸಡಗರದಿಂದ, ಕಲಹಂಸನು ತನ್ನೊಡೆಯನನ್ನು ಹುಡುಕುತ್ತ ಬಕುಲೋದ್ಯಾನಕ್ಕೈತಂದು, ತುಸು ದಣಿವಾರಿಸಿಕೊಳ್ಳುವದಕ್ಕಾಗಿ ಒಂದು ಗಿಡದ ನೆರಳಲ್ಲಿ ಕುಳಿತನು. ಇಷ್ಟರಲ್ಲಿ ಮಕರಂದನಾದರೂ ಅವಲೋಕಿತೆಯ ಮುಖದಿಂದ ಮಾಧವನು ಮದನೋದ್ಯಾನಕ್ಕೆ ಹೋದ ವಾರ್ತೆಯನ್ನು ಕೇಳಿ ತನ್ನ ಕೆಳೆಯನನ್ನು ಹುಡುಕುತ್ತ ಅತ್ತ ಕಡೆಗೇ ನಡೆದನು. ತುಸು ಮುಂದೆಸಾಗಿ ನೋಡುವಷ್ಟರೊಳಗೆ ದೂರದಲ್ಲಿ, ಮರುಳು ಹಿಡಿದವನಂತೆ ಮೆಲ್ಲಮೆಲ್ಲನೆ ನಡೆಯುತ್ತ, ಮೇಲ್ಗಣ್ಣುಮಾಡಿ ಬಿಸುಸುಯ್ಯುತ್ತ ಮದ್ಯಪಾನ ಮಾಡಿದವನಂತೆ ಕೈಕಾಲು ಚಲ್ಲುತ್ತ, ಬರುತ್ತಿರುವ ಕೆಳೆಯನ ಅವಸ್ಥೆಯನ್ನು ಈಕ್ಷಿಸಿ, ಇದೆಲ್ಲ ಪ್ರಾಯಸ್ಥರನ್ನು ತಳಮಳಿಸುವ ಕಂದರ್ಪನ ಆಟವೆಂದು ತಿಳಿದು ಬಳಿಯಲ್ಲಿ ಹೋಗಲು. ಮಾಧವನು ತನ್ನಷ್ಟಕ್ಕೆ—''ಅಹಾ! ಇಂದುವದನೇ, ನಿನ್ನ ಚಲುವಿಕೆಯನ್ನು ನೆನೆನೆನೆಸಿ ಚಿತ್ತವು ಏಕೆ ಈ ತಲ್ಲಣಗೊಳ್ಳುತ್ತದೆ. ನಾಚಿಕೆಯು ಸಹ ನನ್ನನ್ನು ತೊಲಗಿ ಹೋಯಿತು. ವಿನಯವನ್ನಂತೂ ಕಾಣಲೇಇಲ್ಲ; ಧೈರ್ಯವು ಕಳಚಿತು; ಬುದ್ಧಿಯು ಮಂದವಾಗಿರುವದು. ಇದು ಏನೋ ಆಶ್ಚರ್ಯವು! ಹಾ ಸುಂದರೀ, ನೀನು ಎದುರಿನಲ್ಲಿ ನಿಂತಿರಲು ಅಮೃತಪ್ರಾಶನಮಾಡಿದವನಂತೆ ಏನೂ ತೋಚದೆ ಆನಂದಮಯನಾಗಿ ಬೆರಗಾಗಿದ್ದೆನು. ಈಗಲೋ ನಾಲಿಗೆಯಮೇಲೆ ಕೆಂಡವಿಟ್ಟಂತೆ ನನ್ನ ಗತಿಯಾಗಿರುವದು. ಏನು ಮಾಡಲಿ?'' ಹೀಗೆ ಬಡಬಡಿಸುವ ಮಿತ್ರನನ್ನು ಮಕರಂದನು ಎಚ್ಚರಪಡಿಸಿ, ಉರಿಯುವ ಬಿಸಲಿನಿಂದಾಚೆಗೆ ಕರೆದೊಯ್ದು ಉಪವನವನ್ನೆಲ್ಲ ತನ್ನ ಇಂಪಾದ ಪರಿಮಳದಿಂದ ಘಮಘಮಿಸುವ ಸಂಪಿಗೆಯ ಮರದ ತಣ್ಣೆಳಲಲ್ಲಿ ಕುಳ್ಳಿರಿಸಿ,—''ಮಿತ್ರನೇ, ಇದೇನು ನಿನ್ನ ಅವಸ್ಥೆಯು! ಮದನೋತ್ಸವವನ್ನು ನೋಡಿ ತಿರುಗಿಬರುವದರೊಳಗೆ ಹೀಗಾಗಿರುವೆ! ಎಲ್ಲಿಯಾದರೂ ರತಿರಮಣನ ಬಾಣದ ಅಳವಿನಲ್ಲಿ ಸಿಕ್ಕಿರುವೆಯೋ ಏನು? ನಾಚಿಕೆಯಿಂದ ತಲೆಬಗ್ಗಿಸುವದೇಕೆ? ನಿಜವಿದ್ದದ್ದನ್ನು ಬಚ್ಚಿಡದೇ ಹೇಳು. ಹರಿಹರಬ್ರಹ್ಮಾದಿಗಳು

ಸಹ ಮದನಪರವಶರಾಗಿರಲು ತಮೋರಜೋಗುಣಗಳಲ್ಲಿ ಹುಟ್ಟಿ ಬೆಳೆದ ನಮ್ಮಂಥ ಹುಲು ಮನುಜರ ಪಾಡೇನು!"— ಈ ಬಗೆಯಿಂದ ಮಕರಂದನು ಸಂತೈಸಿದ ಬಳಿಕ ಮಾಧವನು— "ಕೆಳೆಯನೇ ಆದಸಂಗತಿಯನ್ನು ನಿನ್ನ ಮುಂದೆ ಮುಚ್ಚಿಟ್ಟು ಫಲವೇನು? ಮೊದಲಿನಿಂದೆಲ್ಲ ಹೇಳುತ್ತೇನೆ; ಕೇಳು. ಈ ಊರಲ್ಲಿ ಮದನೋದ್ಯಾನವೆಂಬ ರಮಣೀಯವಾದ ಉದ್ಯಾನ ವಿರುವದನ್ನು ನೀನು ಬಲ್ಲೆ. ಆ ಉದ್ಯಾನದಲ್ಲಿ ಕಾಮದೇವನ ಗುಡಿಯಿದ್ದದ್ದನ್ನೂ ನೀನು ನೋಡಿರುವಿಯಷ್ಟೇ! ಅಲ್ಲಿ ಈಹೊತ್ತು ಪೌರಸ್ತ್ರೀಯರೆಲ್ಲಕೂಡಿ ಜಾತ್ರೆಯನ್ನು ನೆರಿಸಿದ್ದರು. ಈ ಜಾತ್ರೆಯು ನೋಡತಕ್ಕದ್ದೆಂದು ಅವಲೋಕಿತೆಯು ಬಹು ಬಣ್ಣಿಸಿದರಿಂದ, ನಾನು ಕುತೂಹಲವುಳ್ಳವನಾಗಿ ಕಾಮದೇವಾಲಯವನ್ನು ಕುರಿತು ಪಯಣಮಾಡಿದೆನು. ಅಲ್ಲಿ ನೋಡತಕ್ಕ ಕೌತುಕವನ್ನೆಲ್ಲ ನೋಡಿ ದಣಿದು, ಅರಳುವ ಹೂವುಗಳ ತನಿಗಂಪಿಗೆ ಮೆಚ್ಚಿಬಂದ ತುಂಬಿಗಳ ಹಿಂಡು ಮುಸುಕಿ ಇನಿದಾದ ರಸವನ್ನು ಸವಿಯುತಿರೆ ಬಲು ಅಂದದಿಂದೊಪ್ಪುವ ಚಿಕ್ಕದೊಂದು ಬಕುಲವೃಕ್ಷದ ಕಟ್ಟೆಯ ನೆರೆಯಲ್ಲಿ ನಿಂತುಕೊಂಡು, ಕೆಳಗೆ ದಟ್ಟವಾಗಿ ಉದುರಿಬಿದ್ದ ಹೂವುಗಳನ್ನೆತ್ತಿ, ಒಂದು ಬಹು ಸೊಗಸಾದ ಹಾರವನ್ನು ಕಟ್ಟಲೆಸಗಿದೆನು. ಇಷ್ಟರಲ್ಲಿ, ಥಳಥಳಿಸುವ ಪಚ್ಚಮಾಣಿಕದ ಒಡವೆಗಳಿಂದಲೂ, ಝಗಝಗಿಸುವ ಮೇಲಾದ ಉಡಿಗೆಯಿಂದಲೂ, ಇವಳೇನು ಇಳೆಯನ್ನು ಗೆಲಿಯಲು ಕಳುಹಿದ ಕಾಮರಾಯನ ವಿಜಯ ಪತಾಕೆಯೋ ಎಂಬಂತೆ ಇದ್ದ ಆವಳೋ ಒಬ್ಬ ಕನ್ನಿಕೆಯು ಚದುರೆಯರಾದ ಗೆಳತಿಯರೊಡಗೂಡಿ ಕಡುಸಡಗರದೊಡನೆ ಗರ್ಭಗುಡಿಯಿಂದ ಹೊರಬಿದ್ದು ನಾನಿದ್ದೆಡೆಗೆ ಸಾಗಿದಳು. ಅಹಹ! ಅವಳ ಚಲುವಿಕೆಯನ್ನೆನಿತು ಬಣ್ಣಿಸಲಿ! ಅವಳೇನು ಸಿಂಗರದ ಪುತ್ಥಳಿಯೋ, ಅಥವಾ ಸೌಂದರ್ಯದ ಮನೆಯೋ ನಾನಂತೂ ಹೇಳಲರಿಯೆನು. ಖಂಡಿತವಾಗಿ ಅವಳ ಮುಖವನ್ನು ಚಂದ್ರನಿಂದಲೂ, ಅಧರವನ್ನು ಅಮೃತದಿಂದಲೂ, ಅವಯವಗಳನ್ನು ಕಮಲದ ದೇಟಿನಿಂದಲೂ, ಇತರ ಲಾವಣ್ಯಗಳನ್ನು ಬೆಳದಿಂಗಳಿಂದಲೂ ಕಲ್ಪಿಸಿ ಮದನನೇ ಅವಳನ್ನು ನಿರ್ಮಾಣಮಾಡಿರಬಹುದೆಂದು ತೋರುತ್ತದೆ. ಏಕೆಂದರೆ ವೇದವನ್ನೋದಿಯೋದಿ ಮರುಳಾದ ಬ್ರಹ್ಮಭಟ್ಟನಲ್ಲಿ ಇಷ್ಟು ಕುಶಲತನವೆಲ್ಲಿರುವದು? ಒಳ್ಳೇದು, ಇರಲಿ. ಆಮೇಲೆ ಉದುರಿದ ಹೂವುಗಳನ್ನಾರಿಸಿಕೊಳ್ಳಲಪೇಕ್ಷೆಯುಳ್ಳ ಗೆಳತಿಯರ ಆಗ್ರಹದಿಂದ ನಾನಿದ್ದ ಬಕುಳಮರದ ಹತ್ತರವೇ ಆ ಸುಂದರಿಯು ಬಂದಳು. ಹೊಸದಾಗಿ ಕೊರೆದ ಆನೆಯ ಹಲ್ಲಿನಂತೆ ಬೆಳ್ಳಗಾದ ಆಕೆಯ ಕೆನ್ನೆಯಿಂದಲೂ, ಹಿಂಡಿ ಹಿಪ್ಪಿಯಾದ ಕಮಲದ ದಂಟಿನಂತೆ ಬಾಡಿದ ಶರೀರದಿಂದಲೂ, ಹಾಡಿಯರ ಬಲುಹಿನಿಂದ ಹೇಗಾದರೂ ಬೇಸರಗೊಂಡು ಕೆಲಸದಲ್ಲಿ ತೊಡಗುವದರಿಂದಲೂ, ಆವನೋ ಒಬ್ಬ ಭಾಗ್ಯಶಾಲಿಗೆ ಬಹುದಿನದಿಂದ ಆಕೆಯು ಮನಸೋತಿರಬಹುದೆಂದು ಕಾಣುತ್ತದೆ. ಕೆಳೆಯನೇ, ಆ ಮೋಹಿನಿಯನ್ನು ನೋಡಿದಂದಿನಿಂದ ನನಗಂತೂ ಕಣ್ಣಿನಲ್ಲಿ ಅಮೃತರಸವನ್ನು ಸುರಿದಂತೆ ಏನೋ ಒಂದು ಬಗೆಯ ಸಂತೋಷವಾಗಿ, ಸೂಜಿಗಲ್ಲಿನಿಂದೆಳೆಯಲ್ಪಡುವ ಕಬ್ಬಿ

ಣದ ತುಂಡಿನಂತೆ ನನ್ನ ಅಂತಃಕರಣವು ಅವಳೆಡೆ ಸೆಳೆಯಲ್ಪಟ್ಟಿರುವದು. ಏನೇ ಆಗಲಿ, ಈ ನನ್ನ ದುರುಳ ಮನವು ನನ್ನನ್ನು ಒಳಿತಾಗಿ ಇಲ್ಲದ ಸಂತಾಪಕ್ಕೆ ಗುರಿಮಾಡಿ ಬಿಟ್ಟಿತು. ಪ್ರಾರಬ್ಧದಲ್ಲಿದ್ದರೆ ಹಿತವೂ ಆಗಬಹುದು, ಇಲ್ಲವೆ ಅಹಿತವೂ ಆಗಬಹುದು. ಮುಂದೆ ನನ್ನ ದೈನಗತಿಯು ಹೇಗಿರುವದೋ! ನಾನಂತೂ ಕಾಣೆನು." ಎಂದು ನಿರಾಶನಾಗಿ ಅಂದನು. ಇದನ್ನು ಕೇಳಿ ಮಕರಂದನು:—"ಮಿತ್ರನೇ ಚಿಂತಿಸಬೇಡ. ಸ್ನೇಹಕ್ಕೆ ಏನಾದರೂ ಅಂತ ರಂಗದ ಕಾರಣವಿದ್ದೇ ಇರುತ್ತದೆ. ಕೇವಲ ಬಹಿರಂಗವಾದ ಪ್ರೀತಿಯು ಪ್ರೀತಿಯೆನಿ ಸುವದಿಲ್ಲ. ನೋಡು, ಸೂರ್ಯೋದಯವಾಗಲು ಕಮಲವು ಅರಳುವದು; ಹಾಗೂ ಬೆಳದಿಂಗಳು ಮೂಡಲು ಚಂದ್ರಕಾಂತಮಣಿಯು ದ್ರವಿಸುವದು. ಹೀಗಾಗುವದಕ್ಕೆ ಬಾಹ್ಯಕಾರಣಗಳೇನಾದರೂ ಉಂಟೋ? ಆ ಪದಾರ್ಥಗಳಲ್ಲಿಯ ಅಂತಃಸ್ಥಿತಿಯೇ ಹಾಗಿ ರುವದು. ಒಳ್ಳೇದು ಮುಂದೆ ಏನಾಯಿತು.?

ಮಾಧವ —'ಅನಂತರದಲ್ಲಿ ಆ ಮಹಾನುಭಾವಳ ಗೆಳತಿಯರು ಮೊದಲಿನ ಗುರುತು ಬಲ್ಲವರಂತೆ ನನ್ನೆಡೆ ಬೆರಳು ತೋರಿಸಿ, ಇವನೇ ಅವನೆಂದು ಹುಬ್ಬು ಹಾರಿಸುತ್ತ, ಮುಗುಳುನಗೆಯಿಂದ ಸವಿಯಾದ ಕಡೆಗಣ್ಣನೋಟವನ್ನೆಸೆದು, ಕೈಚಪ್ಪಳೆಯಿಂದ ಗಣಗ ಣಿಸುವ ಕರಕಂಕಣದಿಂದಲೂ, ಮದವೇರಿದ ಅರಸಂಚೆಯ ಉಲಿಯಂತೆ ಝಣಝಣಿಸುವ ಕಾಲಂದುಗೆಗಳಿಂದಲೂ, ಒಡ್ಯಾಣಕ್ಕೆ ಕಟ್ಟಿದ ಕಿರುಗೆಜ್ಜೆಗಳ ಮಂಜುಳ ಸ್ವರದ ವಿಲಾಸದಿಂ ದಲೂ, ಮೋರೆದಿರುಹಿ— ಒಡೆಯಳೇ ಇಂದು ನಮ್ಮ ಭಾಗ್ಯವು ಹೆಚ್ಚಿತು,ಇಲ್ಲಿ ಆವನೋ ನಿಂತಿ ಹನು ನೋಡು, ಎಂದು ಕೈಸನ್ನೆಯನ್ನು ಮಾಡಿದರು. ಇಷ್ಟರಲ್ಲಿ ನಡೆದ ಚಮತ್ಕಾರವನ್ನು ಬಣ್ಣಿಸಲಳವಲ್ಲ. ಆ ಕಮಲಾಕ್ಷಿಯು ಸ್ವೇದಪುಲಕ ಮುಂತಾದ ಮನ್ಮಥಚೇಷ್ಟೆಯ ವಿಕಾರ ಗಳನ್ನು ತೋರಿ, ನೋಡಿನೋಡವಹಾಗೆ ನಾನಾಬಗೆಯಿಂದ ಓರೆಗಣ್ಣುಗಳನ್ನು ತಿರುವಿ ಒಮ್ಮೊಮ್ಮೆ ನಿಚ್ಚಳವಾದ ರೆಪ್ಪೆಗಳಿಂದಲೂ, ಒಮ್ಮೊಮ್ಮೆ ಎವೆಬಡಿಯದ ಕಿರುಗಣ್ಣಿನಿಂದಲೂ ನನ್ನ ನಿಲವುಗೆಟ್ಟ ಹೃದಯವನ್ನೇನು ಸೆಳೆಯುವಳೋ! ಕುಡಿಯುವಳೋ! ಅಥವಾ ಬೇ ರುಕಿತ್ತಿ ಬಿಸುಟಬಿಡುವಳೋ! ಎಂಬಂತೆ ನನ್ನ ಗತಿಯಾಯಿತು. ಈ ರೀತಿ ನನ್ನ ಅಂತಃಕರಣ ದಲ್ಲಿ ಮನೆಮಾಡಿದ ಆ ಚೆಲುವೆಯಿಂದ ಪೂರಾ ಗೆಲ್ಲಲ್ಪಟ್ಟರೂ, ನನ್ನ ಭಾವಗಳನ್ನು ತೋರ್ಪಡಿ ಸಲಿಕ್ಕೆ ಎದೆಸಾಲದೆ, ಕೈಯಲ್ಲಿದ್ದ ಬಕುಲಮಾಲೆಯನ್ನು ಹೇಗಾದರೂ ಒಮ್ಮೆ ಮುಗಿಸಿದೆನು. ಆ ಮೇಲೆ ಖಡ್ಗಾಯುಧಗಳನ್ನು ಧರಿಸಿದ ಪರಿವಾರದಿಂದೊಡಗೂಡಿ ಶಿಂಗರಿಸಿದ ಹೆಣ್ಣಾನೆ ಯನ್ನೇರಿ ಆ ಚಂದ್ರಮುಖಿಯು ಪಟ್ಟಣಕ್ಕೆ ಹೋಗುವ ಬೀದಿಯನ್ನಲಂಕರಿಸಿದಳು. ಹೋಗಹೋಗುತ್ತ ಮುರಿಗೆಯ ದೇಂಟಿನ ಮೇಲೊಪ್ಪುವ ತಾವರೆಯಂತಿರುವ ಮೊಗ ವನ್ನು ತಿರುಹಿ ಅಮೃತದಿಂದಲೂ ವಿಷದಿಂದಲೂ ಕೂಡಿರುವ ಕಟಾಕ್ಷಬಾಣವನ್ನು ನನ್ನೆದೆ ಯಲ್ಲಿ ನಡಿಸಿ ಹೋದಳು; ಆಗಿನಿಂದ ಹುಟ್ಟಿ ಅರಿಯದ ಮತ್ತು ಹೇಳಲಳವಲ್ಲದ ಒಂದು ಬಗೆಯ ಮನೋವಿಕಾರವು ನನ್ನನ್ನು ಮೋಹಗೊಳಿಸಿ, ವಿವೇಕವನ್ನು ಉಡುಗಿಸಿ

ಎದೆಯನ್ನು ಸುಡಹತ್ತಿರುವದು. ಆಹಹ! ನಾನು ಬಹಳೇ ಕಂಗೆಟ್ಟೆನು. ಕಣ್ಣೆದುರಿನ ಪದಾರ್ಥವು ಸಹ ಕಾಣದಹಾಗಾಯಿತು. ನಿತ್ಯಪರಿಚಯದ ವಿಷಯದಲ್ಲಿ ಸಹ ನೆನಪುಹಾರಿತು. ತಣ್ಣೀರಲ್ಲಿ ಮುಳುಗಿ ಬೆಳದಿಂಗಳಲ್ಲಿ ಮೈ ಚಲ್ಲಿದರೂ ಉರಿಯು ಕಡಿಮೆಯಾಗಲೊಲ್ಲದು. ಮನಸ್ಸಂತೂ ದಡಕಾಣದೆ ಚಂಚಲವಾಗಿ ತಲ್ಲಣಿಸುತ್ತಿರುವದು. ಎಂದು ಉಸಿರ್ಗರೆದನು. " ಅನಂಗಪೀಡಿತರಿಗೆ ಅನಂತವಿಕಾರಗಳು. " ಎಂಬ ವೃದ್ಧವಾಕ್ಯವು ಪುಸಿಯಲ್ಲ.

ಕಾಮಪೀಡೆಯಿಂದ ಮರಗುವ ತರುಳರಿಗೆ ಬುದ್ಧಿವಾದ ಹೇಳುವದು ಹೆಡ್ಡತನವು. ಏಕೆಂದರೆ ಎಳೆ ಪ್ರಾಯದಲ್ಲಿ ಈ ತರದ ವಿಕಾರವಾಗುವದು ಅರಿದಲ್ಲ. ಇದೇ ಅಭಿಪ್ರಾಯದಿಂದ ಮಕರಂದನಾದರೂ ತನ್ನ ಕೆಳೆಯನ ಬಲವಾದ ವಿಕಾರವನ್ನು ತಿಳಿದು, ಅವನಿಗೆ ಉಪಚಾರದ ಮಾತು ಹೇಳುವ ಹವ್ಯಾಸಕ್ಕೆ ಬೀಳದೆ, ಆದ ಸಂಗತಿಗೆ ತಕ್ಕ ಹಂಚಿಕೆ ಮಾಡಬೇಕೆಂದು ಯೋಚಿಸಿ ಆ ಕನ್ನಿಕೆಯ ಕುಲನಾಮಗಳನ್ನು ತಿಳಿದುಕೊಂಡಿರುವಿಯೋ, ಇಲ್ಲೋ? ಎಂದು ಪ್ರಶ್ನಮಾಡಲು ಮಾಧವನು— " ಮಿತ್ರನೇ ಕೇಳು; ಆ ತರುಳಿಯು ಆನೆಯನ್ನೇರುವ ಸಮಯದಲ್ಲಿ ಅವಳ ಗೆಳತಿಯರಲ್ಲೊರ್ವಳು ಹಿಂದುಳಿದು ಬಕುಲ ಹೂವುಗನ್ನಾರಿಸುವ ನೆವದಿಂದ ಹತ್ತರ ಬಂದು ಪೊಡಮಟ್ಟು, ನಾನು ರಚಿಸಿರುವ ಬಕುಲಮಾಲೆಯ ಮೇಲೆ ಹಾಕಿ ಚದುರತನದಿಂದ ನುಡಿದಳೇನಂದರೆ—' ಮಹಾಸ್ವಾಮಿ ಈ ತಮ್ಮ ಸುಮನೋನಿವೇಶವು ಸುಗುಣದಿಂದ ಯುಕ್ತವಾದುದರಿಂದ ಬಲು ರಮಣೀಯವಾಗಿರ್ಪುದು. ನಮ್ಮೊಡೆಯಳ ಕುಸುಮೇಷು ವ್ಯಾಪಾರವಾದರೂ ನೂತನವಾಗಿರುವದರಿಂದ ಈ ವಿಷಯದಲ್ಲಿ ಅತ್ಯುತ್ಸುಕತೆಯುಳ್ಳವಳಾಗಿರುವಳು. ಆದಕಾರಣ ತಮ್ಮ ನಿಪುಣತನಕ್ಕೆ ಕೀರ್ತಿ ಸಲ್ಲಲಿ; ವಿಧಾತನ ಮನೋಹರ ನಿರ್ಮಾಣವು ಫಲಿಸಲಿ; ಹಾಗೂ ನಮ್ಮೊಡೆಯಳ ಕೊರಳಲ್ಲಿ ಬೀಳುವ ಯೋಗ್ಯತೆಯು ಈ ಸುಮನೋಹಾರಗೆ ಒದಗಲಿ '— ಮಕರಂದನೇ, ಈ ಮಾತಿನ ಚಮತ್ಕಾರವನ್ನು ಕಂಡೆಯಾ ? ಇರಲಿ; ಆಮೇಲೆ ನಾನು ಆ ಬಾಲಿಕೆಯ ಹೆಸರನ್ನು ಕೇಳಲು ಅವಳು ಅಮಾತ್ಯಭೂರಿವಸುವಿನ ಮಗಳಾದ ಮಾಲತಿಯೆಂದೂ ತಾನು ಆಕೆಯ ಪ್ರಿಯದಾಸಿಯಾದ ಲವಂಗಿಕೆಯೆಂದೂ ಹೇಳಿದಳು. ಆಕೆಯ ಬಿನ್ನಹಕ್ಕೆ ಒಡಂಬಟ್ಟು ನನ್ನ ಕೊರಳೊಳಗಿನ ಬಕುಲಮಾಲೆಯನ್ನು ತೆಗೆದು ಅವಳಿಗೆ ಒಪ್ಪಿಸಿದೆನು. ನನ್ನ ಚಿತ್ತವು ಮಾಲತಿಯನ್ನವಲೋಕಿಸುವದರಲ್ಲಿ ತೊಡಗಿದುದರಿಂದ ಮಾಲೆಯ ಒಂದು ಭಾಗವು ಸರಿಯಾಗಿ ಹೊಂದಿಕೊಂಡಿದ್ದಿಲ್ಲ. ಆದರೂ ಅಂತಹದನ್ನೇ ಮಹಾಪ್ರಸಾದವೆಂದು ಅತ್ಯಾದರದಿಂದ ಕೈಕೊಂಡು, ಜಾತ್ರೆ ಮುರಿದು ತಿರುಗಿ ಪುರಕ್ಕೆ ಹೋಗುವ ಸಂದಣಿಯಲ್ಲಿ ಸೇರಿ ಲವಂಗಿಕೆಯು ಕಣ್ಣುಮರೆಯಾದ ಮೇಲೆ ನಾನೂ ಮನೆಯ ಹಾದಿಯ ಹಿಡಿದೆನು."

ಮಕರಂದನು ಈ ಎಲ್ಲ ಸುದ್ದಿಯನ್ನು ಚಿತ್ತಗೊಟ್ಟು ಕೇಳಿ, ಮಾಲತಿಯ ಮದನಚಿಹ್ನೆಗಳನ್ನು ಧೇನಿಸಿ, ಸಖಿಯರ ವಿನೋದನುಡಿಗಳನ್ನು ಮನಸ್ಸಿನಲ್ಲಿ ತಂದು, ಲವಂಗಿಕೆಯ ಚತುರೋಕ್ತಿಯನ್ನಾದರೂ ಚನ್ನಾಗಿ ವಿಚಾರಿಸಿ, ಮಾಧವನ ವಿಷಯವಾಗಿಯೇ

ಆ ಕನ್ನಿಕೆಯ ಕಾಮಾಭಿಲಾಷೆಯು ಹೆಚ್ಚಿರಬಹುದೆಂದು ಊಹಿಸಿದನು. ಏಕೆಂದರೆ ಅಂಥ ಕುಲೀನಾಂಗನೆಯರು ಒಬ್ಬರಲ್ಲಿ ಮನಸ್ಸಿಟ್ಟು ಮತ್ತೊಬ್ಬರ ಕಡೆ ಕಣ್ಣುಸನ್ನೆ ಮಾಡುವವರಲ್ಲ. ಆದರೆ ಮಾಧವನನ್ನು ಮಾಲತಿಯು ಮೊದಲು ಎಲ್ಲಿ ನೋಡಿರಬಹುದೆಂಬದು ಅವನಿಗೆ ತಿಳಿಯಲಿಲ್ಲ. ಹೀಗೆ ವಿಚಾರದಲ್ಲಿ ತೊಡಗಿರಲು ಮಕರಂದಮಾಧವರು ಬೆರಗಾಗುವಂತೆ ಕಲಹಂಸನು ಅಕಸ್ಮಾತ ನಡುವೆ ಬಂದು ಚಿತ್ರಪಟವನ್ನು ಅವರ ಮುಂದೆ ಮೆಲ್ಲನೇ ಚಾಚಿದನು. ಕಲಹಂಸನು ತನ್ನೊಡೆಯನಾದ ಮಾಧವನನ್ನರಸುತ್ತ ಬಕುಲೋದ್ಯಾನಕ್ಕೈತಂದು ಒಂದು ಮರದ ಬುಡದಲ್ಲಿ ವಿಶ್ರಮಿಸಿದ್ದ ಸಂಗತಿಯನ್ನು ಹಿಂದೆ ಹೇಳಿರುವದಷ್ಟೇ ? ಸ್ವಲ್ಪ ದಣವಾರಿಸಿಕೊಂಡು ಮತ್ತೆ ಅತ್ತಿತ್ತ ಸುಳಿದಾಡುವಷ್ಟರಲ್ಲಿ ಮಕರಂದಮಾಧವರು ಒಂದು ಸಂಪಿಗೆ ಮರದ ನೆಳಲಲ್ಲಿ ಕುಳಿತಿರುವದನ್ನು ದೂರಿನಿಂದ ಕಂಡು, ಮೆಲ್ಲನೆ ಬಂದು ಅವರ ಹಿಂಭಾಗದಲ್ಲಿಯೇ ಮಾಧವನು ಹೇಳುವ ಸಂಗತಿಯನ್ನೆಲ್ಲ ಆಲಿಸುತ್ತ ಕುಳಿತಿದ್ದನು; ಮೇಲೆ ಹೇಳಿದ ಮೇರೆಗೆ ಮಾಧವ-ಮಕರಂದರ ಸಂಭಾಷಣವು ನಡೆದಿರಲು ಕಲಹಂಸನು ಒಳ್ಳೇ ಸಂಧಿಯಲ್ಲಿ ಮಾಧವನ ಚಿತ್ರವನ್ನು ಮುಂದಿರಿಸಿದನು. ಆಗ ಮಕರಂದನು ಕಲಹಂಸನಿಗೆ- "ಎಲೋ ಈ ಚಿತ್ರಪಟವನ್ನಾರು ಬರೆದಿರುವರೋ ?" ಎಂದು ಕೇಳಿದನು. ಅದಕ್ಕೆ ಕಲಹಂಸನು,-'ಅದನ್ನು ತನ್ನ ಸಮಾಧಾನದ ನಿಮಿತ್ತವಾಗಿ ಮಾಲತಿಯು ಬರೆದಿರುವಳು, ಮತ್ತು ಲವಂಗಿಕೆಯಿಂದ ಮಂದಾರಿಕೆಗೂ ಮಂದಾರಿಕೆಯ ಕೈಯಿಂದ ತನಗೂ ದೊರೆಯಿತು.' ಎಂದರುಹಿದ ಬಳಿಕ ಮಕರಂದನು ಮುಗುಳುನಗೆಯಿಂದ "ಮಾಧವನೇ ಇನ್ನು ಮನದ ಉಮ್ಮಳಿಕೆಯನ್ನು ತೊರೆ; ನಿನ್ನ ಕಣ್ಣಿಗೆ ಚಂದಿರನಂತಿರುವ ಆ ಸುಜಾತೆಯ ಹೃತ್ಕುಮುದವನ್ನರಳಿಸುವ ಕಮಲಮಿತ್ರನು ನೀನೆಯಾಗಿರುವೆ. ಅವಳ ಪ್ರಾಪ್ತಿಯು ನಿನಗೆ ಆಗುವದೆಂಬದಕ್ಕೆ ಸಂದೇಹವೇ ಬೇಡ. ಈ ಕೆಲಸದಲ್ಲಿ ವಿಧಿಮದನರು ನಿನ್ನ ಸಲುವಾಗಿ ಸೊಂಟಕಟ್ಟಿರುವರು. ಆದರೆ ಆ ಮೋಹನಾಂಗಿಯು ಎಂಥವಳಿರುವಳೋ ನಾನಂತೂ ಕಂಡಿಲ್ಲ; ಇದೇ ಚಿತ್ರಪಟದ ಮೇಲೆ ಅವಳ ಸ್ವರೂಪವನ್ನು ಬರೆ; ನೋಡುವ." ಎಂದು ಅವನ ಹತ್ತರ ಚಿತ್ರಪಟವನ್ನೂ ಬರಹದ ಸಾಮುಗ್ರಿಯನ್ನೂ ಇಡಲು ಮಾಧವನು ಮಾಲತಿಯ ಚಿಂತನೆಯಿಂದ ಕಂಬನಿಗಳನ್ನು ಸುರಿಸುತ್ತ, ಜೆವರಿದ ಬೆರಳನ್ನದರಿಸುತ್ತ, ಸ್ತಬ್ಧಗಾತ್ರನಾಗಿ ಹೇಗಾದರೂ ಒಮ್ಮೆ ತನ್ನ ಮನೋದೇವತೆಯ ಲಾವಣ್ಯವನ್ನು ಬರೆದು ಅದರ ಬುಡದಲ್ಲಿ ಒಂದು ಶ್ಲೋಕವನ್ನು ಸಹ ರಚಿಸಿದ್ದನು; ಅದೇನಂದರೆ-

### हरिणीवृत्त

जगति जयिनस्तेते भावा नवेन्दुकलादयः
प्रकृति मधुरास्संतेवान्ये मनोमदयंति ये ।
मम तु यदियं यातालोके विलोचनचंद्रिका
नयनविषयं जन्मन्येकः सएव महोत्सवः ॥

ತಾತ್ಪರ್ಯ:— ಈ ಜಗತ್ತಿನಲ್ಲಿ ಬಿದಿಗೆಯ ಚಂದಿರನಂತೆ ಸ್ವಭಾವದಿಂದಲೇ ಸವಿಯಾಗಿಯೂ, ಮನೋಹರವಾಗಿಯೂ ಇರುವಂಥ ಅನೇಕ ಒಡವೆಗಳಿರಬಹುದು. ಆದರೆ ನನ್ನ ಕಣ್ಣಿಗೆ ತಂಪುನೀಡುವ ಬೆಳದಿಂಗಳೋಪಾದಿಯಲ್ಲಿ ಉದಯಿಸಿದ ಈ ಮೋಹಿನಿಯು ಮಾತ್ರ ನನಗೆ ಸರ್ವಥಾ ಮಹೋತ್ಸವವನ್ನುಂಟುಮಾಡಿರುವಳು.

ಇಷ್ಟರಲ್ಲಿ ಮಂದಾರಿಕೆಯು, ಚಿತ್ರಪಟವನ್ನು ತೆಗೆದುಕೊಂಡು ಹೋಗುವ ಉದ್ದೇಶದಿಂದ ಕಲಹಂಸನ ಹೆಜ್ಜೇಹಿಡಿದು ಅಲ್ಲಿಗೇ ಬಂದಳು. ಆ ಪಟದ ಮೇಲೆ ಮಾಲತಿಯು ಚಿತ್ರವ ಬರೆದುದನ್ನು ಕಂಡು ಹರ್ಷಿತಳಾಗಿ ಅದನ್ನು ಲವಂಗಿಕೆಗೆ ತೋರಿಸಬೇಕೆಂಬ ಲಗುಬಗೆಯಿಂದ ಬೀಳ್ಕೊಂಡು ಹೊರಟುಹೋದಳು. ಮಂದಾರಿಕೆಯ ಬಾಯಿಯಿಂದ ಮಾಲತಿಯು ಮದನತಾಪಕ್ಕೆ ಮಾಧವನೇ ಕಾರಣವೆಂದೂ ಮಾಧವನು ರಾಜಬೀದಿಯಲ್ಲಿ ತಿರುಗಾಡುವಾಗ ತನ್ನ ಮೇಲುಪ್ಪರಿಗೆಯಿಂದ ಅವನನ್ನು ನೋಡುತ್ತಿದ್ದಳೆಂದೂ ತಥ್ಯವನ್ನು ತಿಳಿದು ಮಕರಂದನಿಗೂ ಮಾಧವನಿಗೂ ಹಿಡಿಸಲಾರದ ಆನಂದವಾಯಿತು. ಹೀಗೆ ಮಾತಾಡುತ್ತ ಕುಳಿತಿರಲು, ಬಾನ್ಮಣಿಯು ತೀರ ಮೇಲಕ್ಕೆ ಬಂದು ತನ್ನ ಪೊಳೆವ ಕದಿರುಗಳ ಜಳದಿಂದ ಮಾಧವನನ್ನು ಕಳವಳಗೊಳಿಸಹತ್ತಿದನು. ಮೊದಲೇ ತಾಳಲಾರದ ಐಸರಳನ ತಾಪವು; ಅದರಲ್ಲಿ ಇಂತಹ ಬಿಸಲಿನುರಿಯು. ಆದುದರಿಂದ ಕಿಚ್ಚಿನಲ್ಲಿ ಎಣ್ಣೆ ಸುರಿದಂತಾಗಿ ಮಾಧವನ ಸುಕುಮಾರಾಂಗವು ಕಂದಿತು; ಮೋರೆಯು ಬಾಡಿತು; ಬೆವರಿನಿಂದ ಬಟ್ಟೆಗಳು ತೊಯಿದವು. ಮಲ್ಲಿಗೆಯ ಮೊಗ್ಗೆಯಂತೆ ಕೋಮಲ ತನುವುಳ್ಳ ಮಾಲತಿಯು ಗತಿಯು ಏನಾಗಿರಬಹುದು? ಕುಂದ ಕುಸುಮಗಳ ಗಂಧಸೋಂಕಿದ ಮಂದಮಾರುತನು ಮಾಲತಿಯು ಅವಯವಗಳನ್ನು ಮೊದಲು ಆಲಿಂಗಿಸಿ ಆಮೇಲೆ ಮಾಧವನೆಡೆ ಬೀಸಿದ್ದರೆ ಅವನಿಗೆ ಅಲ್ಪಸ್ವಲ್ಪ ಉಪಶಮನವಾಗಬಹುದಾಗಿತ್ತು.

ಆದರೆ ಅಂಥ ಭಾಗ್ಯೋದಯವು ಮಾಧವನಿಗೆಲ್ಲಿ ಬರುವದು? ಕರುಣೆಯಿಲ್ಲದೆ ಮಾರನು ಅಂಬುಗಳನ್ನೆಸೆಯುಹತ್ತಿದನು. ಮಾಲತಿಯ ಹೊರತು ಮಾಧವನಿಗೆ ಬೇರೊಂದು ಕಾಣದ ಹಾಗಾಯಿತು; ಮೊಗಪೊಂದಾವರೆಯ ಮೇಲೆ ಕುಳಿತಿರುವ ಮರಿದುಂಬಿಗಳ ಜತೆಯೋ, ಏನೋ! ಎಂಬಂತೆಸೆವ ನೇತ್ರದ್ವಯವನ್ನು ತಿರುವುತ್ತ, ಮುಂದೆಹಿಂದೆ, ಎಡಬಲ, ಒಳಹೊರ, ಎತ್ತನೋಡಿದತ್ತ ಸುತ್ತಲು ಸುಳಿದಾಡುವ ಮಾಲತಿಯೇ ಕಾಣತೊಡಗಿದಳು. ದೇಹದಲ್ಲಿ ಸಂತಾಪವು ಹೆಚ್ಚಿತು; ಮೋಹದಿಂದ ಪಂಚೇಂದ್ರಿಯ ವ್ಯಾಪಾರವು ಮಂದವಾಯಿತು; ಅಂತಃಕರಣವೆಲ್ಲ ಮಾಲತೀಮಯವಾಗಿ ಉದ್ವೇಗದಿಂದ ದಹಿಸಹತ್ತಿತು. ಈ ಗತಿಯಾದ ಕೆಳೆಯನನ್ನು ನೋಡಿ ಮಕರಂದನು ವ್ಯಾಕುಲಗೊಂಡು ಮುಂಗಾಣದೆ ಕಾಮಂದಕಿಗಾದರೂ ಅರುಹಿ ತಕ್ಕ ಹಂಚಿಕೆಯನ್ನು ಯೋಜಿಸಬೇಕೆಂದು, ಮಾಧವನನ್ನು ಕರಕೊಂಡು ಬಿಡಾರಕ್ಕೆ ಹೊರಟುಹೋದನು.

( ಬಕುಲಬೀದಿಂಸೆಂಬ ಮೊದಲನೆಯ ಅಧ್ಯಾಯವು. )

## ೨ ನೇ ಅಧ್ಯಾಯ.



ಹಿಂದೆ ಹೇಳಿದಂತೆ ಮಕರಂದನು ಕಾಮಂದಕಿಯನ್ನು ಕಂಡು, ಮದನೋದ್ಯಾನದ ಮಹೋತ್ಸವದಿಂದ ತನ್ನ ಸ್ನೇಹಿತನ ಮೇಲೆ ಆದ ಪರಿಣಾಮವನ್ನರುಹಿ ಹೋದನು. ಬಳಿಕ ಕಾಮಂದಕಿಯು ತಾನು ನೆನಿಸಿದ ಕಾರ್ಯವು ಕೈಗೂಡುವದೆಂದು ಮನದೊಳಗೆ ಹಿಗ್ಗಿ, ಮಾಲತಿಯ ಪ್ರಕೃತಿಸ್ಥಿತಿಯನ್ನು ನೋಡಲಪೇಕ್ಷಿಸಿ ಮಾಲತಿಯ ಸುದ್ದಿಯನ್ನು ತಿಳುಕೊಂಡು ಬರಲಿಕ್ಕೆ ಅವಲೋಕಿತೆಯನ್ನು ಕಳುಹಿದಳು. ಇತ್ತ ಮಾಲತಿಯು ಬಕುಲೋದ್ಯಾನದಲ್ಲಿ ನಡೆದ ವಿಶೇಷ ಸಂಗತಿಯಿಂದ ಅತಿ ವ್ಯಾಕುಳಿತಳಾಗಿ ಬಕುಲ ಪುಷ್ಪಗಳನ್ನು ಆರಿಸುವ ನೆವದಿಂದ ಹಿಂದುಳಿದ ಲವಂಗಿಕೆಯು ಹಾದಿಯನ್ನೇ ನೋಡುತ್ತ ಕುಳಿತಿದ್ದಳು. ಅಷ್ಟರಲ್ಲಿ ಮದನೋದ್ಯಾನದಿಂದ ಲವಂಗಿಕೆಯು ದೂರದಲ್ಲಿ ಬರುತ್ತಿರುವುದನ್ನು ಕಂಡು ಎದುರುಗೊಂಡು ಬರಬರುವುದರೊಳಗೇ ಆಕೆಯ ಕೈಯ್ಯಲ್ಲಿ ಕೈಹಾಕಿ ತವಕದಿಂದ ಮೇಲುಪ್ಪರಿಗೆಯನ್ನೇರಿ ಧವಲಮಂದಿರವನ್ನು ಹೊಕ್ಕು ಏಕಾಂತದಲ್ಲಿ ಮಾಧವನ ವಾರ್ತೆಯನ್ನು ಆಲಿಸುತ್ತಿರುವ ಪ್ರಸಂಗದಲ್ಲಿ:— "ಏನೇ, ಲವಂಗಿಕೇ ಈ ಬಕುಲಹಾರದ ಒಂದು ಮಗ್ಗಲು ಹೀಗೇಕೆ ಅಸ್ತವ್ಯಸ್ತವಾಗಿರುವದೇ?"

ಲವಂಗಿಕೆ:— "ಆ ತಪ್ಪು ನಿನ್ನದೇ! ಏಕಂದರೆ ಆತನ ಚಿತ್ತವು ನಿನ್ನಲ್ಲಿ ಸಿಲುಕಿದುದರಿಂದ ಹಾರವನ್ನು ಕಟ್ಟುವುದರಲ್ಲಿ ಕೈಯಾಡದೇ ಸಡಿಲಾಗಿರಬಹುದು; ನಿನ್ನ ಸಮಾಧಾನಕ್ಕೋಸ್ಕರ ಹೀಗೆ ನುಡಿಯುವೆನೆಂದು ತಿಳಿಯಬೇಡ; ಈ ಮಾತು ನಿಜವು. ನಿನ್ನ ಎದುರಿನಲ್ಲಿಯೇ ಕಾಮನ ಬಿಲ್ಲಿನಂತಿರುವ ಹುಬ್ಬನ್ನು ಹಾರಿಸಿ ಓರೆನೋಟದ ವಿಲಾಸದಿಂದ ಮಾರವಿಕಾರವನ್ನು ತೋರಿ ಮಿಡುಕಿದ ಮಾಧವನನ್ನು ನೀನು ನೋಡಲಿಲ್ಲವೇ!

ಮಾಲತಿ:— ಅಹಹ! ನಮ್ಮಂಥ ಮುಗ್ಧಕನ್ನಿಕೆಯರನ್ನು ಮೋಸಗೊಳಿಸುವ ಅವನ ಸ್ವಾಭಾವಿಕ ವಿಲಾಸವೇ ಅದು; ಬೇರೊಂದಲ್ಲ.

ಲವಂಗಿಕೆ:— ನೀನಾದರೂ ಅವನನ್ನು ನೋಡಿ ಕಟ್ಟಾಡಿಸಿದವರಂತೆ ಕುಣಿದಾಡಿದ್ದು ಸ್ವಾಭಾವಿಕವಲ್ಲವೇ!

ಮಾಲತಿಯು ನಾಚಿಕೆಯಿಂದ ನಿರುತ್ತರಳಾಗಿ ಮುಂದಿನ ಸಂಗತಿಯನ್ನು ಕೇಳಿದಳು. ಲವಂಗಿಕೆಯು ತಾನು ಮದನೋದ್ಯಾನದಿಂದ ತಿರುಗಿಬಂದು ಮಂದಾರಿಕೆಯ ಮನೆಗೆ ಹೋಗಿ ಆಕೆಯ ಕೈಯ್ಯಲ್ಲಿ ಮೊದಲು ಮಾಧವನ ದೃಷ್ಟಿಗೆ ಬೀಳಬೇಕೆಂಬ ಉದ್ದೇಶದಿಂದ ಕೊಟ್ಟಿದ್ದ ಚಿತ್ರಪಠವನ್ನು ತೆಗೆದುಕೊಂಡುಬಂದ ವರ್ತಮಾನವನ್ನೆಲ್ಲ ಹೇಳಿ ದುರ್ಲಭ ಮನೋರಥದಿಂದ ಕಾಳಲ್ಪರದ ವೇದನೆಯನ್ನು ತುಂಬಿಸುವದಕ್ಕಾಗಿ

ಮಾಧವನು ಸ್ವಂತ ಕೈಯಿಂದ ಬರೆದ ಮಾಲತಿಯ ಪ್ರತಿರೂಪವನ್ನು ಆಕೆಗೆ ತೋರಿಸಿದಳು. ಅದನ್ನು ಮಾಲತಿಯು ಕೈಯ್ಯಲ್ಲಿ ಹರ್ಷದಿಂದ ಎತ್ತಿಪಿಡಿದು ಲವಂಗಿಕೆಯು ಆಡಿದ್ದೇ ನಿಜವೆಂದು ಮನಸಿನಲ್ಲಿ ಸುಖಪಡುತ್ತ ದಿಟ್ಟಿಸಿ ನೋಡುತ್ತಾಳೆ! ಅದರಡಿಯಲ್ಲಿ ಒಂದು ಪದವನ್ನು ಕಂಡಳು ಅದನ್ನು ಪ್ರೇಮದಿಂದ ಹಾಡಿಹಾಡಿ "ಮಹಾಭಾವನೇ, ನಿನ್ನ ದರ್ಶನದಿಂದ ತಾತ್ಕಾಲ ಸುಖವಾದರೂ ಕೊನೆಯಲ್ಲಿ ಕಡು ಸಂತಾಪವಾಗುವದು. ನಿನ್ನನ್ನು ನೋಡದಿರುವ ಬಾಲೆಯರೇ ಭಾಗ್ಯಶಾಲಿಗಳು; ಒಂದುವೇಳೆ ನೋಡಿ ಕಾಮಪರವಶರಾಗದವರಂತೂ ಧನ್ಯರು." ಎಂದು ಮಾಧವನ ಮಧುರಗುಣಗಳನ್ನು ನೆನೆನೆನೆಸಿ ಕಣ್ಣೀರು ಹಾಕುವ ಮಾಲತಿಯನ್ನು ಕಂಡು ಲವಂಗಿಕೆಯು—"ಸಖಿಯೇ ಇನ್ನಾದರೂ ನಾ ನಂಬುವದು ಮನಗಂಡೆಯಾ? ಆವನೋಸುಗ ನಿನ್ನ ಮೊಗವು ಕಳಿಚಿಬಿದ್ದ ಪಾರಿಜಾತಹೂವಿನಂತೆ ಕಳೆಗುಂದಿರುವುದೋ, ಅವನಾದರೂ ನಿನ್ನ ಸಲುವಾಗಿ ಮದನಬಾಣದ ಕಠಿಣಪ್ರಹಾರವನ್ನು ಅನುಭೋಗಿಸುತ್ತಿರುವನು." ಎಂದಳು.

ಮಾಲತಿಯು ಮಾಧವನಲ್ಲಿ ಆಸಕ್ತಳಾಗಿದ್ದರೂ ತನ್ನ ಕಾಂಕ್ಷೆಯು ಎಡರಿಲ್ಲದೆ ಕೈಗೂಡುವದೆಂಬ ಬಗ್ಗೆ ಆಕೆಗೆ ನಂಬುಗೆ ಇದ್ದಿಲ್ಲ. ತಾನಪೇಕ್ಷಿಸಿದ ಗಂಡನನ್ನೇ ತಾಯಿತಂದೆಗಳು ಹೊಂದಿಸಿ ಕೊಡುವರೆಂದು ಏತರ ಮೇಲಿಂದ? ಹಾಗೂ ನಂದನನ ಬಗ್ಗೆ ಹಾರಸುದ್ದಿಯನ್ನಾದರೂ ಕಿವಿಮುಟ್ಟ ಕೇಳಿದ್ದಳು; ಅಂದಿನಿಂದ ಉದಾಸೀನಳಾಗಿ ಮೂರು ಪಾಲು ಆಶೆಯನ್ನೇ ತೊರೆದಿದ್ದಳು. ಆದರೂ ಮಾಧವನ ವಿಷಯಕವಾದ ಮನಸ್ತಾಪವು ಹೇಗೆ ತಾನೇ ಕಡಿಮೆಯಾದೀತು? ಮೈಯಲ್ಲಿ ವಿಷಹಬ್ಬಿದಂತೆ ಆಗಿ ಆಕೆಯ ಅವಯವಗಳು ಝೊಂಪಿಸಿದವು. ಹೊಗೆಯಿಲ್ಲದೆ ಸುಡುವ ಉರಿಯು ಹೃದಯದಲ್ಲಿ ಪಸರಿಸಿತು. ವಿಷಮಜ್ವರಪೀಡಿತರಂತೆ ಶರೀರವು ಬೆಂದಿತು.

ಉಪರಿ ಉಳುಹುವವರಿಲ್ಲದೆ ಬನ್ನಬಡುವ ದೀನಳನ್ನು ಕುರಿತು ಲವಂಗಿಕೆಯು—"ಪ್ರಿಯಳೇ ಒಂದೇ ನಿಮಿಷ ಕಿಟಕಿಯೊಳಗಿಂದ ಅಡ್ಡಸುಳಿದ ಮಾಧವನನ್ನು ನೋಡಿದುದಕ್ಕೆ ಪೂರ್ಣಚಂದ್ರಬಿಂಬವು ಸಹ ಕೆಂಡದಂತೆ ಭಾಸವಾಗಿ ನಿನ್ನ ಜೀವವು ತಳಮಳಗೊಂಡಿತ್ತು; ಇಂದು ಅವನನ್ನು ಕಣ್ಣು ತುಂಬಾ ನೋಡಿ ಅಂಡಲೆಯುವೆ. ಇದರಲ್ಲಿ ಸೋಜಿಗವೇನು? ಆದರೂ ಸಖಿಯರ ಮುಖಾಂತರ ಪ್ರಿಯಸಮಾಗಮವಾಗಬಹುದೆಂಬದೊಂದೇ ಅರಿಕೆಯಿರುತ್ತದೆ." ಎಂದಳು. ಇದನ್ನು ಕೇಳಿ ತಿರಸ್ಕಾರದಿಂದ ಮಾಲತಿಯು—"ಅಹಹ! ಲವಂಗಿಕೇ! ಕೇವಲ ನನ್ನ ಪಂಚಪ್ರಾಣದ ಮೇಲೆ ಲಕ್ಷವಿಟ್ಟು ಅನುಚಿತ ಸಾಹಸವನ್ನು ಮಾಡಲು ಹೇಳುವೆಯಾ? ನೀನಾದರೂ ಏನು ಮಾಡುವೆ? ನಿನ್ನ ಮೇಲೆ ಸುಮ್ಮನೇ ನಂಬಿಗೆಯನ್ನಿಟ್ಟು ಮರೆಮಾಚದೇ ಹೇಳಿದ್ದು ನನ್ನದೇ ತಪ್ಪು. ಇರುಳಿನಲ್ಲಿ ಚಂದಿರನು ತನ್ನ ಕಿರಣಗಳನ್ನೆಲ್ಲ ಚಾಚಿ ಎಷ್ಟೇ ಉರಿಯಲಿ! ಮದನನು ಎಷ್ಟೇ ತಾಪ

ಬಡಿಸಲಿ! ಮರಣಕ್ಕಿಂತ ಹೆಚ್ಚು ಏನಾಗುವದು? ಸತ್ಕೀರ್ತಿಯನ್ನು ಪಡೆದ ತಾತನೂ ನಿರ್ಮಲವಂಶದ ತಾಯಿಯೂ ಕುಂದಿಲ್ಲದ ಮನೆತನವೂ ನನಗೆ ಪ್ರಿಯಕರವಾದುದಲ್ಲದೆ ಜೀವದ ಮೇಲಿನ ಹಂಗು ನನಗಿಲ್ಲ.” ಎಂದಳು.

ಹೀಗೆ ಮಾತನಾಡುತ್ತ ಕುಳಿತಿರಲು ಮಾಲತಿಯ ಸುದ್ದಿಯನ್ನು ತಿಳಿಯಲು ಬಂದ ಅವಲೋಕಿತೆಯು ಹೊರಗಿನ ತೊತ್ತುಗಳ ಬಾಯಿಯಿಂದ ಲವಂಗಿಕೆಯಗೂಡ ಮಾಲತಿಯು ಧವಲಮಂದಿರದೊಳಗೆ ಏಕಾಂತದಲ್ಲಿದ್ದುದನ್ನು ಕೇಳಿ ಕಾಮಂದಿಕಿಗೆ ಹೋಗಿ ಅರಿಕೆ ಮಾಡಿದ್ದಳು. ಕಾಮಂದಕಿಯು ಮಾಲತಿಯ ದರುಶನಕ್ಕೆ ಇದು ಒಳ್ಳೇ ಸಮಯವೆಂದು ಅವಲೋಕಿತೆಯ ಕೂಡ ಹೊರಟಳು ಬರಬರುತ್ತ ಹಾದಿಯಲ್ಲಿ ಭೂರಿವಸುವು ಅರಸನೆದುರಿನಲ್ಲಿ ಆಡಿದ ಜಾಣ್ಣುಡಿಯನ್ನು ಹೊಗಳುತ್ತ, ಮನ್ಮಥೋದ್ಯಾನದಲ್ಲಿ ನಡೆದ ಸಂಗತಿಯನ್ನು ಕೇಳಿ ವಿಧಿಯು ತನಗೆ ಅನುವಾಗಿರುವನೆಂದು ಉಲ್ಹಾಸ ಬಡುತ್ತ, ಮಾಲತಿಯ ಮಂದಿರದ ಸಮೀಪಕ್ಕೆ ತಲುಪಿದ ಬಳಿಕ ಹೊರಗಾವಲಿನ ದಾಸಿಯರಿಗೆ ತಾನು ಬಂದ ಸುದ್ದಿಯನ್ನು ಒಳಗೆ ನಿರೂಪಿಸಲಿಕ್ಕೆ ಹೇಳಿ ಕಳುಹಿದಳು. ಕಾಮಂದಕಿಯು ತನ್ನ ಕಾಣಲೋಸುಗ ಬಂದಿರುವದನ್ನು ತಿಳಿದು ಮಾಲತಿಯು ಮೊದಲು ಲಗುಬಗೆಯಿಂದ ಚಿತ್ರಪಠವನ್ನು ಬಚ್ಚಿಟ್ಟು ಆಮೇಲೆ ಜಾಗ್ರತೆಯಿಂದ ಒಳಗೆ ಕರಕೊಂಡು ಬರುವದಕ್ಕೆ ಅಪ್ಪಣೆಯು ಮಾಡಿದಳು. ಕಾಮಂದಕಿಯು ಧವಲಮಂದಿರದ ಒಳಮನೆಯಲ್ಲಿ ಪ್ರವೇಶ ಮಾಡಿ ದೂರದಿಂದಲೇ ಮಾಲತಿಯ ಸೊರಗಿದ ಶರೀರವನ್ನೂ ಕಂದಿದಮುಖವನ್ನೂ ನೋಡಿ ಬೆರಗಾಗಿ, ಮದನದಾಹದಿಂದಾದ ಅವಸ್ಥೆಯನ್ನು ಕಂಡು ಕನಿಕರಪಡುತ್ತ ಸಮೀಪಿಸುವಷ್ಟರಲ್ಲಿ, ಪ್ರಿಯಸಮಾಗಮವನ್ನು ಮನದಲ್ಲಿ ಅನುಭವಿಸುವವಳಂತೆ ಮಾಲತಿಯಗತಿಯಾಯಿತು. ಕೆಳದುಟಿಗಳು ಅದರ ಹತ್ತಿದವು; ಬಾಹುಗಳು ಇಳಿದವು; ಮೈಯೆಲ್ಲ ಬೆವರು ಬಂದು ನಡುಗು ಹುಟ್ಟಿತು; ಗಲ್ಲಗಳ ಮೇಲೆ ರೋಮಾಂಚಗಳೆದ್ದವು. ಮತ್ತು ದಣಿದವರಂತೆ ಮೂರ್ಛೆಗೊಂಡು ಪುನಃ ಚೇತರಿಸುತ್ತಿದ್ದಳು. ಕಾಮಂದಕಿಯು ತೀರ ಬಳಿಯಲ್ಲಿ ಬರಲು ಲವಂಗಿಕೆಯು ಮಾಲತಿಯನ್ನೆಚ್ಚರಪಡಿಸಿ ಎದ್ದುನಿಲ್ಲಿಸಿ ಕಾಮಂದಕಿಯ ಅಡಿಗಳಿಗೆರಗಿಸಿದಳು. ಕಾಮಂದಕಿಯು ಇಷ್ಟಫಲಪ್ರಾಪ್ತಿಯಾಗಲೆಂದು ಹರಸಿ, ನೆರೆಯಲ್ಲಿದ್ದ ಆಸನದ ಮೇಲೆ ಕುಳಿತ ಮೇಲೆ ಲವಂಗಿಕೆಯು ವಾಡಿಕೆಯಂತೆ ಕುಶಲ ಪ್ರಶ್ನೆಗಳನ್ನು ಮಾಡಲು, ಕಾಮಂದಕಿಯು ನಿಟ್ಟುಸಿರು ಬಿಟ್ಟು—“ತಂಗೀ ಏತರ ಕುಶಲವವ್ವಾ!” ಎಂದು ನುಡಿದಳು. ಲವಂಗಿಕೆಯು ಕಾಮಂದಕಿಯ ಕಪಟವನ್ನು ತಿಳಿದೂ ತಿಳಿಯದವಳಂತೆ—“ಈ ಹೊತ್ತು ಅಮ್ಮನವರ ಪ್ರಕೃತಿಯು ಸ್ವಸ್ಥವಿದ್ದಂತೆ ತೋರುವದಿಲ್ಲ. ಅಸಮಾಧಾನಕ್ಕೇನಾದರೂ ಕಾರಣವುಂಟಾಗಿರುವದೋ?” ಎಂದು ಕೇಳಿದಳು. ಅದಕ್ಕೆ ಕಾಮಂದಕಿಯು—“ನೀನೇನು ಅರಿಯುವದಳೇ? ಲೋಕವನ್ನು ಜಯಿಸುವದಕ್ಕಾಗಿ ನಿರ್ಮಿಸಿದ ಮದನಾಯುಧವೋ, ಏನೋ! ಎಂಬಂತಿರುವ ನಿನ್ನ ಲಾವ

ಜ್ಞಾನವತಿಯಾದಸಖಿಯು ಅಯೋಗ್ಯನಾದ ನಂದನನ ಪಾಲಿಗೆ ಹೋಗುವಳೆಂದು ಕೇಳಿ ಈಕೆಯ ಸುಗುಣಗಳೆಲ್ಲ ನಿರರ್ಥಕವಾಗುವವಲ್ಲ! ಎಂದು ಚಿಂತಿಸುತ್ತೇನೆ; ಮತ್ತೇನೂ ಇಲ್ಲ. ಅಮಾತ್ಯರು ಗುಣಗಳನ್ನು ಪರೀಕ್ಷಿಸದೆ ಹೀಗೆ ಉಪಕ್ರಮಿಸುವದು ಕಡುಸೋಜಿಗವು. ಅಥವಾ ಕುಟಿಲರಾಜನೀತಿಯಲ್ಲಿ ನಿಪುಣರೆನಿಸುವವರಿಗೆ ಮಕ್ಕಳ ಮೇಲೆ ಅಕ್ಕರತೆ ಹೇಗೆ ಬರುವದು? ನಂದನನಿಗೆ ಕನ್ಯಾದಾನವನ್ನು ಮಾಡದೆಹೋದರೆ, ಒಂದುವೇಳೆ ತನಗೆ ರಾಜ್ಯಕಾರ್ಯದಲ್ಲಿ ಕೇಡುಬಗೆದಾನೆಂಬ ಅಂಜಿಕೆಯಿಂದ ಅಮಾತ್ಯರು ಈ ಮೇರೆಗೆ ವರ್ತಿಸುವದು ತಕ್ಕದ್ದೇ ಸರಿ. ದೊರೆಗಳ ಪ್ರೀತಿಯನ್ನು ಗಳಿಸುವದಕ್ಕಿಂತ ಹೆಚ್ಚಿನದಾವದೂ ಇಲ್ಲ. ಇಲ್ಲವಾದರೆ ಅಂಥ ಕುರೂಪಿಯಾದ ಮುದಿಹದ್ದಿಗೆ ಮಗಳನ್ನು ಕೊಡುವೆನೆಂಬ ವಿಚಾರವಿಲ್ಲದೇ ಮಾತು ಹೇಗೆ ಕೊಟ್ಟಾನು? ಈ ಕೆಲಸದಲ್ಲಿ ಯಾರದೂ ಹಂಚಿಕೆ ನಾಟದು. ಹೆಣ್ಣುಮಕ್ಕಳು ತಂದೆ ತಾಯಿಗಳ ಅಪ್ಪಣೆಗೆ ತಲೆಬಾಗಿ ನಡೆಯತಕ್ಕದ್ದು. ಅದೃಷ್ಟದಲ್ಲಿ ಬರೆದದ್ದನ್ನಾರು ತಪ್ಪಿಸುವರು? ಕಶ್ಯಪಮುನಿಯ ಸಾಕುಮಗಳಾದ ಶಕುಂತಲೆಯು ದುಷ್ಯಂತರಾಜನನ್ನೂ, ಊರ್ವಶಿಯು ಪುರೂರವ ರಾಜನನ್ನೂ ಗಂಧರ್ವವಿಧಿಯಿಂದ ಕೂಡಿಕೊಂಡುದುದನ್ನು ಬಲ್ಲವರು ಹೇಳುತ್ತಾರೆ. ವಾಸವದತ್ತೆಯನ್ನು ಮೊದಲು ಸಂಜಯನೆಂಬ ಅರಸನಿಗೆ ವಾಗ್ದಾನಮಾಡಿ ಕೊಟ್ಟಿದ್ದರೂ, ತಾನೇ ಉದಯನನೆಂಬವನಿಗೆ ಮದುವೆಯಾದಳು. ಆದರೆ ಇವೆಲ್ಲ ಸಾಹಸದ ಕಾರ್ಯಗಳು, ಆದುದರಿಂದ ಇಲ್ಲಿ ಹೇಳತಕ್ಕದ್ದಲ್ಲ. ಸರ್ವಥಾ ದೊರೆಗಳ ಪ್ರಿಯಮಿತ್ರನಾದ ನಂದನನಿಗೆ ತನ್ನ ಮಗಳನ್ನು ಕೊಟ್ಟು ಅಮಾತ್ಯನು ಸುಖಿಯಾಗಲಿ. ನಿರ್ಮಲನಾದ ಪೂರ್ಣಚಂದ್ರನು ರಾಹುವಿನಿಂದ ಕೂಡಿಕೊಳ್ಳುವಂತೆ ಈಕೆಯು ಆ ಕುರೂಪನನ್ನು ಹೊಂದಲಿ.” ಎಂದಳು.

ಮನಸಿಗೆ ಹತ್ತುವ ಇಂಥ ನುಡಿಗಳನ್ನು ಕೇಳಿ ಮಾಲತಿಗೆ ಎಷ್ಟು ಕಷ್ಟವಾಗಿರಬಹುದು? ತಾತನು ತನ್ನನ್ನು ಹವನಕರ್ಮದ ಬಲಿಯಂತೆ ಉರಿಯಲ್ಲಿ ನೂಕಿಬಿಡುವನೆಂದು ಕಣ್ಣೀರು ತಂದು ಪರಿಪರಿಯಿಂದ ಹಲುಬಿದಳು. ಆಕೆಯ ತಲೆಯ ಮೇಲೆ ಗುಡ್ಡವು ಉರುಳಿಬಿದ್ದಂತಾಯಿತು. ಸ್ವಾರ್ಥವನ್ನು ಅವಲಂಬಿಸಿ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು ಸಹ ನಡುನೀರಲ್ಲಿ ಕೈಬಿಡುವ ತಂದೆಯ ಅವಗುಣಗಳನ್ನು ನೆನೆಸಿ ಮಿಡುಕಿದಳು.

ಕಾಮಂದಕಿಯು ಮಾಲತಿಯ ಸಮಾಚಾರಕ್ಕೆ ಬಂದ ಕಾರ್ಯವನ್ನು ಇನ್ನೂ ಕೊನೆಗಾಣಿಸಿದ್ದಿಲ್ಲ. ಮಾಧವನ ಗುಣಾನುವಾದವನ್ನೂ ಅವನ ಮನೆತನದ ದೊಡ್ಡಸ್ತಿಕೆಯನ್ನೂ ಹೊಗಳಿ ಕಳ್ಳಮದುವೆಗೆ ಸಲುವಳಿಯಾಗದ ವರನಲ್ಲೆಂದು, ಮಾಲತಿಯ ಮನದಲ್ಲಿ ತುಂಬಿಸುವದಿತ್ತು. ಕಾಮಂದಕಿಯ ಈ ಹವಣಿಕೆಯನ್ನು ಅರಿತು ಸಂಗಡ ಬಂದ ಅವಲೋಕಿತೆಯು— “ಅಮ್ಮಾ ಹೊತ್ತಾಯಿತು. ಮಾಧವನು ನೆಮ್ಮದಿಯಾಗಿಲ್ಲ; ಹೇಗಿರುವನೋ!” ಎಂದು ಜಾಣ್ಣುಡಿಯನ್ನಾಡಿದುದರಿಂದ ಮಾಲತಿಗೂ ಲವಂಗಿ

ಕೆಗೂ ಈ ಮಾಧವನೆಂಬವನಾರಿರಬಹುದೆಂದು ಸಹಜವೇ ಲವಲವಿಕೆಯುಂಟಾಯಿತು. ಕಾಮಂದಕಿಯು ಮಾಲತಿಗೆ ಹೋಗಲಪ್ಪಣೆಯನ್ನು ಕೇಳುವ ಸಮಯದಲ್ಲಿ ಮಾಲತಿಯ ಕಣ್ಣುಸನ್ನೆಯ ಅನುಮತಿಯಿಂದ ಲವಂಗಿಕೆಯು— "ಅಮ್ಮಾ ತಾವು ಇಷ್ಟು ಮಮತೆಮಾಡುವ ಈಮಾಧವನೆಂಬವನಾರು?" ಎಂದು ಕೇಳಿದುದಕ್ಕೆ ಕಾಮಂದಕಿಯು— "ಆ ಕಥೆಯು ದೊಡ್ಡದಿರುವದು, ಹಾಗೂ ಈಗ ಹೇಳುವ ಹೊತ್ತಲ್ಲ. ಆದರೂ ನಿನ್ನ ಆಗ್ರಹವು ಬಹಳ ಇರುವದರಿಂದ ಸ್ವಲ್ಪದರಲ್ಲಿ ಹೇಳುವೆನು ಆಲಿಸು. ವಿದರ್ಭ ದೇಶವನ್ನು ಪಾಲಿಸುವ ಅರಸನೋಲಗದಲ್ಲಿ ಹೆಸರುಗೊಂಡ ದೇವರಾತನೆಂಬ ಮುಖ್ಯ ಮಂತ್ರಿಯು ರಾಜಕಾರಣದಲ್ಲಿ ಧುರೀಣನೆನಿಸಿ, ಸಮಸ್ತ ಮಂತ್ರಿಮಂಡಲಕ್ಕೆ ಶಿರೋಮಣಿಯಾಗಿ ಪ್ರಜೆಗಳನ್ನೊಲಿಸಿಕೊಂಡು ಒಳ್ಳೇ ಪ್ರತಿಷ್ಠೆಯನ್ನು ಪಡೆದಿರುವನು. ನಿನ್ನ ಸಖಿಯ ತಂದೆಯಾದ ಭೂರಿವಸುವು ಆತನ ಸಹಾಧ್ಯಾಯಿಯಾದುದರಿಂದ ಅವನ ಮಹಿಮೆಯನ್ನೆಲ್ಲ ಬಲ್ಲನು. ವಿಮಳವಾದ ಕೀರ್ತಿಯೆಂಬ ಬೆಳಕನ್ನು ನಾಲ್ದೆಸೆಯಲ್ಲಿ ಹರವಿ ಪುಣ್ಯಕ್ಕೆ ಸ್ಥಾನವಾಗಿ ಎಣೆಯಿಲ್ಲದ ಮಹಾತ್ಮ್ಯವನ್ನು ಪಡೆದು ಮಂಗಲಕಾರ್ಯಕ್ಕೆ ಅಗ್ರಗಣ್ಯರೆಂದೆನಿಸಿಕೊಂಡಂಥ ಸಾತ್ವಿಕರು. ಈ ಲೋಕದಲ್ಲಿ ಹುಟ್ಟುವದು ಅಪರೂಪವು. ಎಳೆಕಾಂತಿಯಿಂದ ಹೊಳೆವ ಚಂದಿರನು ಉದಯಪರ್ವತದಿಂದ ಚಂದವಾಗಿ ಹೊರಟು ಸಕಲರಿಗೆ ಆನಂದಪಡಿಸುವಂತೆ ಆ ಮಹಾಪುರುಷನ ಉದಯದಲ್ಲಿ ಗುಣವಂತನಾದ ಒಬ್ಬನೇ ಮಗನು ಹುಟ್ಟಿ ಎಲ್ಲರಿಗೂ ಮಹೋತ್ಸವವನ್ನುಂಟುಮಾಡಿರುವನು. ಆ ಮಗುವು ಚಿಕ್ಕತನದಲ್ಲಿಯೇ ವಿದ್ಯೆಯ ಅಭಿಲಾಷೆಯಿಂದ ಮನೆಬಿಟ್ಟು ತೆರಳಿ ಸದ್ಯಕ್ಕೆ ಇಲ್ಲಿ ಬಂದಿರುವನು. ಅವನು ಈ ಹೊಳಲುಬೀದಿಗಳಲ್ಲಿ ತಿರುಗಾಡುವಾಗ ಶರಚ್ಚಂದ್ರನಂತಿರುವ ಅವನ ನಗೆಮೊಗವನ್ನು ಕಾಣಲಪೇಕ್ಷಿಸಿ ತವಕಗೊಂಡು ನೆರೆದ ಹೆಂಗಳೆಯರಿಂದ ಉಪ್ಪರಿಗೆಯ ಕಿಟಕಿಗಳೇನು ಕಮಲಗಳಿಂದ ತುಂಬಿರುವವೋ ಎಂಬಂತೆ ತೋರುವವು. ಅವನ ಕೂಡ ಮಕರಂದನೆಂಬುವ ಬಾಲಮಿತ್ರನೊಬ್ಬನು ಬಂದಿದ್ದು ಈರ್ವರೂ ನ್ಯಾಯಶಾಸ್ತ್ರದ ಅಧ್ಯಯನವನ್ನು ಆರಂಭಿಸಿರುವರು. ಆ ತರುಳನಿಗೆ ಮಾಧವನೆಂದು ಕರೆಯುತ್ತಾರೆ.

ಹೀಗೆ ಕಾಮಂದಕಿಯು ಮಾಧವನ ಸುದ್ದಿಯನ್ನು ಹೇಳುವಷ್ಟರಲ್ಲಿ ಮೂರುಸಂಜೆಯಾಯಿತು. ಸಂಧ್ಯಾಸಮಯವನ್ನು ಸೂಚಿಸುವ ಶಂಖನಾದವು ಚಕ್ರವಾಕ ಮಿಥುನವನ್ನು ನಿದ್ದೆಗೇಡುಮಾಡಿ, ಮುಂದೆ ಬರುವ ವಿರಹದ ಚಿಂತೆಯಿಂದ ಬೇಜಾರಗೊಳಿಸಿತು. ಎತ್ತರವಾದ ಚಪ್ಪರದ ಸಂದುಗಳಲ್ಲಿಯೂ, ಸೂರಿನ ಹೊದಿಗೆಗಳಲ್ಲಿಯೂ ಕಿಲಿಬಿಲಿ ಶಬ್ದಮಾಡುತ್ತ ಹಕ್ಕಿಗಳು ತಮ್ಮ ತಮ್ಮ ಗೂಡು ಸೇರಿಕೊಂಡವು. ಕಾಮಂದಕಿಯು ಹೊತ್ತಾಯಿತೆಂದು ಚಟ್ಟನೆ ಎದ್ದು ಅಪ್ಪಣೆಯನ್ನು ಕೇಳಿ ಅವಲೋಕಿತೆಯನೊಡಗೊಂಡು ಹೊರಟುಹೋದಳು. ಮಾಡುವ ಕೆಲಸವನ್ನೆಲ್ಲ ಜೋಕೆಯಿಂದ

ನೆರವೇರಿಸಿದವರಿಂದ ಆಕೆಯ ಮನಸು ಹಗುರಾಗಿತ್ತು. ನಂದನನ ಬಗ್ಗೆ ಅಸಹ್ಯತೆಯನ್ನೂ ತಂದೆಯಲ್ಲಿ ಅವಿಶ್ವಾಸವನ್ನೂ ಹುಟ್ಟಿಸಿ ಮುಂದಣಕಾರ್ಯದ ಹಾದಿಯನ್ನು ಮಾಲತಿಗೆ ತೋರಿಸಿದಳು. ಪ್ರಸಂಗವು ಒದಗಿದ ಹಾಗೆ ಮಾಧವನ ಗುಣಸ್ತುತಿಯನ್ನೂ ಅವನ ಮನೆತನದ ಘನತೆಯನ್ನೂ ಬಣ್ಣಿಸಿದಳು; ಇನ್ನು ಮುಂದೆ ಮಾಡುವದು ಸ್ವಲ್ಪೇ ಉಳಿದಿತ್ತು. ಮಾಲತಿಯು ಮಾತ್ರ ತನ್ನ ತಂದೆಯ ನಡತೆಯನ್ನು ಮನಗಂಡು ನೊಂದುಕೊಂಡಳು. ಮಾಧವನ ಗುಣಾತಿಶಯವನ್ನು ಕಿವಿಮುಟ್ಟ ಕೇಳಿ ಅವನನ್ನು ಮರಳಿ ಎಂದು ನೋಡುವೆನೆಂಬ ಹಾರೈಕೆಯಿಂದ ಇರುಳನ್ನೆಲ್ಲ ಮನದ ಎಣಿಕೆಯಲ್ಲಿಯೇ ಕಳೆದಳು.

---

## ಧವಲಮಂದಿರವೆಂಬ ಎರಡನೆ ಅಧ್ಯಾಯವು.

## ೩ನೆ ಅಧ್ಯಾಯವು.

ಈ ಮೇರೆಗೆ ಕಾಮಂದಕಿಯು ಮಾಲತಿಗೆ ದಿನಾಲು ದರುಶನ ಕೊಡುತ್ತ, ನಾನಾ ಬಗೆಯ ಸವಿಮಾತುಗಳಿಂದ ಆಕೆಯ ಮನವೊಲಿಸಿ ಉಪಾಯದಿಂದ ತನ್ನಲ್ಲಿ ಪೂರಾ ನಂಬಿಗೆಯನ್ನುಂಟುಮಾಡಿಕೊಂಡಳು. ಕಾಮಂದಕಿಯು ಒಂದು ಕ್ಷಣ ಎದುರಿನಲ್ಲಿರದೆಹೋದರೆ ಮಾಲತಿಯ ಚಿತ್ತವು ಸೊಗಸುಗೊಳ್ಳದಹಾಗಾಯಿತು; ಆಕೆಯ ಸಮಕ್ಷದಲ್ಲಿ ಮಾತ್ರ ಪ್ರಸನ್ನಮುಖಳಾಗಿರುತ್ತಿದ್ದಳು. ಕಾಮಂದಕಿಯ ಕೂಡ ಹಗಲೆಲ್ಲ ಗುಟ್ಟು ಮಾತಾಡಬೇಕೆಂಬ ಕೋರಿಕೆಯು ಆಕೆಯಲ್ಲಿ ಹುಟ್ಟಿತು. ಕಾಮಂದಕಿಯು ಹೋಗುವ ಸಮಯದಲ್ಲಿ ಪ್ರೀತಿಯಿಂದ ಅವಳಿಗೆ ಕಾಣ್ಕೆಯನ್ನು ಅರ್ಪಿಸುತ್ತಿದ್ದಳು. ಮತ್ತು ಅವಳು ಹೋದಲ್ಲಿ ಹಿಂಬಾಲಿಸಿ ಕೊರಳಲ್ಲಿ ಕೈಹಾಕಿ ಹೋಗಬೇಡವೆಂದು ಬಹುಪರಿಯಿಂದ ಆಣೆಯ ಹಾಕುತ್ತಿದ್ದಳು. ಕಾಮಂದಕಿಯು ತೆರಳುವಾಗ್ಗೆ ಆಕೆಯ ಕಾಲಲ್ಲಿ ಬಿದ್ದು ಮರಳಿ ಬರಲು ಬಿನ್ನವಿಸುತ್ತಿದ್ದಳು; ಇದಕ್ಕೂ ಹೆಚ್ಚಿನದೇನೆಂದರೆ, ಕಾಮಂದಕಿಯ ಬಾಯಿಯಿಂದ ಬೇರೆ ಮಾತುಗಳ ಪ್ರಸಂಗದಲ್ಲಿ ಜಾಣತನದಿಂದ ಬೆರಿಸಿದ, ಶಾಕುಂತಳಾದಿ ಕಥೆಗಳನ್ನು ಕೇಳಿ ಚಿಂತಾತುರಳಾಗಿ ಆಕೆಯ ತೊಡೆಯಮೇಲೆ ತಲೆಯಿಟ್ಟು ದುಮ್ಮಾನದಿಂದ ಮಲಗುತ್ತಿದ್ದಳು. ಈ ಮಟ್ಟಿಗೆ ತನ್ನಕೆಲಸವು ಕೈಗೂಡಿದುದನ್ನು ತಿಳಿದು, ಒಮ್ಮೆ ಮಾಲತೀಮಾಧವರ ದರ್ಶನ ಮಾಡಿಸಬೇಕೆಂದು ಹವಣಿಸಿ, ಕಾಮಂದಕಿಯು ಒಂದು ದಿನ, ಕೃಷ್ಣಪಕ್ಷದಲ್ಲಿ ಚತುರ್ದಶಿ ಇದ್ದುದರಿಂದ ಮಾಲತಿಯು ತನ್ನ ಕೈಯಿಂದ ಶಂಕರನ ಪೂಜೆಯನ್ನು ಮಾಡಿದರೆ ಆಕೆಯ ಸೌಭಾಗ್ಯವು ಬೆಳೆಯುವದೆಂದು ಹೇಳಿ, ಮಾಲತಿಯ ತಾಯಿಯ ಕಡೆಯಿಂದ ಶಂಕರಾಲಯಕ್ಕೆ ಕರಕೊಂಡು

ಹೋಗುವದಕ್ಕೆ ಅಪ್ಪಣೆಯನ್ನು ಪಡಕೊಂಡಳು. ಕಾಮಂದಕಿಯು ವಿರಕ್ತಳಾದುದರಿಂದಲೂ, ಪುರಾಣಶಾಸ್ತ್ರಗಳನ್ನೋದಿ ಒಳ್ಳೇ ಬುದ್ಧಿವಂತಳಾದುದರಿಂದಲೂ, ಎಲ್ಲರ ವಿಶ್ವಾಸವು ಆಕೆಯುಲ್ಲಿತ್ತು. ಕಾಮುಂದಕಿಯು ತಾನಾಗಿಯೇ ಮಾಲತಿಯುನ್ನು ಸತ್ಕಾರ್ಯಕ್ಕೋಸುಗ ಕರಕೊಂಡು ಹೋಗುವಳೆಂದುನಂಬಿ, ಭೂರಿವಸುವಿನ ಮಡದಿಯು, ಸಂಗಡ ವಿಶೇಷ ಪರಿವಾರದವರನ್ನು ಕಳುಹಿಸುವ ಅವಶ್ಯಕತೆಯನ್ನು ಕಾಣದೆ ಲವಂಗಿಕೆಯನ್ನೊಬ್ಬಳನ್ನೇ ಮಾತ್ರ ಜತೆಮಾಡಿ ಕಳುಹಿಸಿದಳು. ಮಾಲತಿಯು ತನ್ನ ಹೆತ್ತವನ ನಿಷ್ಠುರತೆಯನ್ನು ನೆನೆನೆನೆದು ದುಃಖಿಸುತ್ತಲೇ ಕಾಮುಂದಕೀ ಲವಂಗಿಕೆಯರೊಡನೆ ಶಂಕರಾಲಯವನ್ನು ಕುರಿತು ಹೊರಟಳು.

ಆ ಶಂಕರಾಲಯದ ಬದಿಯಲ್ಲಿ ಚಿಕ್ಕದೊಂದು ಕುಸುಮಾಕರನೆಂಬ ಹೂದೋಟವಿತ್ತು. ಅಲ್ಲಿರುವ ಮಾವಿನ ಮರಗಳು ನೂತನವಾದ ಕೆಂಜಿಗುರಿನಿಂದ ಕೂಡಿಕೊಂಡು, ಕಣ್ಣಿಗೆ ಬಲು ಸೊಂಪಾಗಿ ತೋರುತ್ತಿದ್ದವು; ಚಿಗುರಿನ ಮಧುರರಸಕ್ಕೆ ಮೆಚ್ಚಿ ಬಂದ ನೂರಾರು ಕೋಗಿಲೆಗಳ ಇಂಪಾದ ಉಲಿವು, ಸಂಪಿಗೆಯ ಮರದ ಕಮ್ಮಲರ ಮೇಲೆ ಎರಗಿದ ತುಂಬಿಗಳ ಜೇಂಕಾರ ಧ್ವನಿಯಿಂದ ಬೆರತು ಬನವನ್ನೆಲ್ಲ ತುಂಬಿದುದರಿಂದ ಅದು ವಸಂತರಾಯನ ಉತ್ಸವಕ್ಕೆ ತಂದ ಮಂಗಲವಾದ್ಯದಂತೆ ಒಪ್ಪುತ್ತಿತ್ತು. ಅಲ್ಲಿ ಕ್ರೀಡಿಸುವ ರಾಜಹಂಸಗಳು, ತಾವರೆಯ ಹೂವಿನ ದೇಟುಗಳನ್ನೂ ಮಲ್ಲಿಗೆಯ ಮೊಗ್ಗೆಗಳನ್ನೂ ಕಡಿಕಡಿದು ಸೂಗೆಯ ಮಾಡುವದರಿಂದ, ಹೂವಿನ ಹುಡಿಯು ನಾಲ್ಕೂ ಕಡೆಯಲ್ಲಿ ಹರಹಿ, ಘ್ರಾಣೇಂದ್ರಿಯವನ್ನು ಸೊಗಸುಗೊಳಿಸುತ್ತಿತ್ತು. ಆ ಬನದಲ್ಲಿ ಸುಳಿದಾಡುವ ತಂಗಾಳಿಯು ಸುಗಂಧದಿಂದ ಕೂಡಿಕೊಂಡು ಕಾಮುಕರನ್ನು ಕ್ಷಣಹೊತ್ತು ಸೈಪಿಡುತ್ತಿತ್ತು.

ಈ ಉದ್ಯಾನದಲ್ಲಿ ಅವಲೋಕಿತೆಯು ಕಾಮುಂದಕಿಯ ಹೇಳಿಕೆಯಿಂದ ಮಾಧವನನ್ನು ಒಂದು ಕಡೆ ಗುಂಪಾದ ಅಶೋಕ ಗಿಡಗಳ ಮರೆಯುಲ್ಲಿ ಅಡಗಿಸಿದ್ದಳು. ಅಲ್ಲಿ ಮಾಧವನು ಮಾಲತಿಯು ಬರುವ ಹಾದಿಯನ್ನೇ ನಿರೀಕ್ಷಿಸುತ್ತಿದ್ದನು. ಅಷ್ಟರಲ್ಲಿ ಬಿಸಿಲಿನುರಿಯಿಂದ ಬಾಯಾರಿದ ನವಿಲು, ಅಡ್ಡಮಳೆಯ ಸೂಚಕವಾದ ಕಾರ್ಮಿಂಚಿಗೆ ಹರುಷಗೊಳ್ಳುವಂತೆ ದೂರದಿಂದ ಬರುವ ಕಾಮುಂದಕಿಯನ್ನು ಕಂಡು ಮಾಧವನ ಅಂತಃಕರಣವು ಬಿರಿಯಿತು. ಕಾಮುಂದಕಿಯ ಬೆನ್ನುಹತ್ತಿ ಮಾಲತೀಲವಂಗಿಕೆಯರೂ ಬಂದರು. ಮಾಲತಿಯ ಮುಖಚಂದ್ರವನ್ನು ಕಂಡಕೂಡಲೆ ಚಳಿಯಿಂದ ನೀರು ಬಿಡುವ ಚಂದ್ರಕಾಂತ ಶಿಲೆಯಂತೆ ಮಾಧವನ ಹೃದಯವು ದ್ರವಿಸಿತು; ಮನಸಿಜತಾಪವು ಮತ್ತೆ ಹೆಚ್ಚಿತು. ಇಷ್ಟರಲ್ಲಿ "ಲವಂಗಿಕೇ! ಈ ಅಶೋಕ ಮರದ ಕೆಳಗೆ ಬಿದ್ದ ಹೂವುಗಳನ್ನು ಆರಿಸುವ ಬಾ" ಎಂದು ಮಾಲತಿಯ ತುಟಿಯಿಂದ ಹೊರಟ ಮಧುರನುಡಿಯು ಕಿವಿಯಲ್ಲಿ ಬಿದ್ದ ಕೂಡಲೆ, ಹೊಸಮಳೆಯಿಂದ ಮುಳ್ಳೆದ್ದ ಕದಂಬ ಮೊಗ್ಗೆಯಂತೆ ಮಾಧವನ ಮೈಯು

ಲ್ಲ ಪುಳುಕಿತವಾಯಿತು. ಆಮೇಲೆ ಮಾಲತೀ ಲವಂಗಿಕೆಯರು ಹೂವುಗಳನ್ನಾರಿಸ ತೊಡಗಿದರು. ತುಸು ಹೊತ್ತು ಅತ್ತಿತ್ತ ಓಡಾಡಿ ಪೂಜೆಗೋಸ್ಕರ ಹೂವುಗಳನ್ನು ಗುಂಪು ಗೂಡಿಸುವಷ್ಟರಲ್ಲಿ ಮಾಲತಿಯು ತೀರ ದಣಿದಳು. ಶ್ರಮದ ಉಬ್ಬಸದಿಂದ ಸ್ಪಷ್ಟ ಶಬ್ದಗಳು ಹೊರಡದ ಹಾಗಾದವು. ಮೋರೆಯ ಮೇಲೆ ಬೆವರಿನ ಹನಿಗಳು ಹರಿಯಹತ್ತಿದವು. ದಣುವಿಕೆಯಿಂದ ಕಣ್ಣುಗಳನ್ನು ಅರೆನಾಸಿ ಮುಚ್ಚುತ್ತಿದ್ದಳು. ಇವೆಲ್ಲ ಮಾನಸಿಕ ವಲ್ಲಭಸಮಾಗಮದ ಲಕ್ಷಣಗಳೆಂದು ಕಾಮಂದಕಿಯು ಅರಿತು, ಮಾಲತಿಯನ್ನು ತಡೆದು ಕೆಲಸದಿಂದ ನಿಲ್ಲಿಸಿ, ಕೈ ಹಿಡಿದು ಕೆಳಗೆ ಕುಳ್ಳಿರಿಸಿದಳು. ಆ ಮೇಲೆ ಬಳಿಯಲ್ಲಿ ಯಾರ ಸುಳಿವೂ ಇಲ್ಲವೆಂದು ಮನಗಂಡು, ಮಾಲತಿಯ ಗದ್ದವನ್ನು ಪಿಡಿದು, ನಾಚಿಕೆಯಿಂದ ತಗ್ಗಿಸಿದ ಮೋರೆಯನ್ನು ಮೇಲಕ್ಕೆತ್ತಿ, ಕಕ್ಕುಲತೆಯಿಂದ— "ಮಗುವೇ, ನಿನಗೆ ಒಂದು ಮಾತು ಹೇಳುವದುಂಟು; ಚಿತ್ತಗೊಟ್ಟು ಕೇಳು, ಒಮ್ಮೆ ನಿನಗೆ ನಾನು ಪ್ರಸಂಗವಶದಿಂದ ಮಾಧವನೆಂಬವನ ಬಗ್ಗೆ ಹೇಳಿರುವದು ಸ್ಮರಣೆಯಲ್ಲಿದ್ದೀತು. ಆ ಕುವರನು ನಿನ್ನಂತೆಯೇ ನನಗೆ ಪ್ರಿಯನಾಗಿರುತ್ತಾನೆ. ಮನ್ಮಥೋದ್ಯಾನದ ಜಾತ್ರೆಯ ದಿವಸದಿಂದ ಮನಸ್ಸಿನಲ್ಲಿ ಸೊಗಸಿಲ್ಲದೆ ಶರೀರಸಂತಾಪದಿಂದ ಅವನು ಬಹಳೇ ಪರಾಧೀನನಾಗಿರುವನು; ಏತರಿಂದಲೂ ಸಮಾಧಾನ ಪಡದೆ, ಹಿತವ ಬಯಸುವವರನ್ನು ಸಹ ನಂಬದಿರುವನು. ಧೀರನಾದರೂ ಒಡಲೊಳಗಿನ ಉರಿಯಿಂದ ತಳಮಳಿಸುತ್ತಿರುವನು. ಶಾಮ ಸುಂದರವಾದ ಅವನ ಶರೀರವು ಒಣಗಿ ಬಿಳುಪಾಗಿರುತ್ತದೆ. ಇದಕ್ಕೆ ನೀನೇ ಕಾರಣನೆಂಬದನ್ನು ಕೇಳಿ, ಮನಗಂಡಿರುತ್ತೇನೆ; ಏಕೆಂದರೆ ಸಮುದ್ರದಂತೆ ಗಂಭೀರ ಸ್ವಭಾವವುಳ್ಳ ಆ ಮಹಾತ್ಮನ ಮನಸ್ಸನ್ನು ಕಲಕು ಮಾಡಬೇಕಾದರೆ ನಿನ್ನ ಮುಖ ಚಂದ್ರಮನ ಹೊರತು ಇನ್ನಾರು ಸಮರ್ಥರು? ಇರಲಿ; ಈಗತಿಯಾಗಿರುವದರಿಂದ ಆತನು ತನ್ನ ಜೀವಕ್ಕೆ ಸಹ ಬೇಸತ್ತು ಏನು ಮಾಡಿಕೊಳ್ಳುವನೋ ಎಂದು ಹೆದರಿರುತ್ತೇನೆ. ತನ್ನವಸ್ಥೆ ಮುಂದೆ ಏನಾದೀತೆಂದು ಲೆಕ್ಕಿಸದೆ ಜೀವದ ಆಶೆದೊರೆದು ಕೋಗಿಲೆಯ ಸ್ವರಕ್ಕೆ ಕಿವಿಗೊಟ್ಟು ಹೊಸದಾಗಿ ಚಿಗುರಿದ ಮಾಮರವನ್ನೇ ನೋಡುತ್ತ ಕೂಡ್ರುವನು; ಬಕುಳ ಹೂಪಿನ ಪರಿಮಳದಿಂದ ಯುಕ್ತವಾದ ತಂಗಾಳಿಗೆ ಮೈಯೊಡ್ಡಿ, ಮೈಮೇಲೆ ತಣ್ಣೀರಿನಿಂದ ತೊಯಿಸಿದ ನೈದಿಲೆಯ ದಳಗಳನ್ನು ಇರಿಸಿಕೊಳ್ಳುವನು; ಹಾಗೂ ಬೆಳದಿಂಗಳಲ್ಲಿ ಕೈಕಾಲು ಚಲ್ಲಿ ಹಾ! ಎಂದು ಉಸಿರುಗರೆಯುತ್ತಿರುವನು. ಮೊದಲೇ ಸುಕುಮಾರನಾದುದರಿಂದ ಇಂಥ ಅಪರಿಚಿತ ವೇದನೆಯನ್ನು ತಾಳಲಾರದೆ ಒಂದುವೇಳೆ ಸಾವನ್ನು ಸಹ ತಂದುಕೊಳ್ಳಬಹುದು" ಎಂದು ನುಡಿದಳು.

ಈ ಮಾತನ್ನೆಲ್ಲ ಮರೆಯಾಗಿ ಕೇಳುತ್ತಿದ್ದ ಮಾಧವನು ಸಹ ಕಾಮಂದಕಿಯ ಚದುರತನಕ್ಕೆ ಬೆರಗಾಗಿ ಮೂಗಿನ ಮೇಲೆ ಬೆರಳಿಟ್ಟುಕೊಂಡನು. ಇಂಥ ಸಮಯೋಚಿತ ಮತ್ತು ಗಂಭೀರ ಸವಿನುಡಿಯಿಂದಲೇ ಎಲ್ಲ ಕಾರ್ಯಗಳು ನೆರವೇರುವವು. ಮಾಲತಿಯು

ಅತಿಸರಳ ಮನಸಿನವಳಾದುದರಿಂದ ಇದನ್ನೆಲ್ಲ ನಿಜವೆಂದು ತಿಳಿದು ಗಾಬರಿಯಾಗಿ ತನ್ನ ಸಲುವಾಗಿ ಇಷ್ಟು ಕಷ್ಟಪಡುವ ಪ್ರಾಣವಲ್ಲಭನನ್ನು ಹೇಗೆ ಉಳಿಸಬೇಕೆಂದು ಚಿಂತಿಸ ಹತ್ತಿದಳು. ಇಷ್ಟರಲ್ಲಿ ಕುಶಲಳಾದ ಲವಂಗಿಕೆಯು ಮಾಲತಿಯ ಪಕ್ಷಹಿಡಿದು ಕಾಮಂದ ಕಿಗೆ— " ಅಮ್ಮಾ, ನನಗಾದರೂ ಕೊಂಚ ಹೇಳುವದುಂಟು; ಅಪ್ಪಣೆಯಾದರೆ ಹೇಳು ವೆನು. ನಮ್ಮ ಸಖಿಯು ಹಾಡಾದರೂ ಹೀಗೇ ಆಗಿದೆ. ಮಾಧವನು ಒಮ್ಮೊಮ್ಮೆ ನಮ್ಮ ಮನೆಯ ಎದುರಿನ ಬೀದಿಯ ಅಂಗಳದಲ್ಲಿ ಹಾದು ಹೋದರೆ ಸಾಕು, ರವಿ ಕಿರಣಸ್ಪರ್ಶ ದಿಂದ ಬಿರಿಯುವ ಕಮಲದ ಹೂವಿನಂತೆ ನಮ್ಮ ಸಖಿಯ ಸುಂದರವದನಾರವಿಂದವು ಘಲ್ಲನೆ ಅರಳಿ ಕೆಲಹೊತ್ತು ಅಂದಗೊಂಡರೂ, ಹಿಂದುಗಡೆ ಕಂದರ್ಪವೇದನೆಯಿಂದ ಪರಿ ಜನರನ್ನು ಎದೆಗುಂದಿಸುವದು; ಆಟ ನೋಟವಿಂದ ಮನಸುತೆಗೆದು ಎಡಗೈ ಮೇಲೆ ಕೆನ್ನೆ ಯನ್ನಿರಿಸಿ, ಹಗಲಿರುಳು ಚಿಂತೆಯಲ್ಲಿಯೇ ಹೊತ್ತುಗಳೆಯುವಳು; ಒಮ್ಮೊಮ್ಮೆ ಬೇಸತ್ತು ಹಿತ್ತಲಿನ ತೋಟದಲ್ಲಿ ಹೋಗಿ ವಿಶ್ರಮಿಸುವದಕ್ಕಾಗಿ ಮಲ್ಲಿಗೆಯ ಹಂದರದ ಬುಡದಲ್ಲಿ ಹಾಸುಗಲ್ಲಿನ ಮೇಲೆ ಕುಳಿತರೂ, ತಾವರೆಗೊಳದ ತುಂತುರಹನಿಗಳಿಂದ ತನುವೇರಿದ ಮಂದಮಾರುತನು ಅರೆಬಿರಿದ ಮಲ್ಲಿಗೆಯ ಮೊಗ್ಗಿಗಳ ಮತ್ತು ಮಾಮರದ ಎಳೆವಳಿರುಗಳ ಮಕರಂದದಿಂದ ಕೂಡಿ ಬೀಸಿದರೂ, ಸಂತಾಪವು ಹೆಚ್ಚೇ ಆಗುವದು. ಹಾಗೂ ಆ ಜಾತ್ರೆಯದಿನ ತನ್ನ ಉತ್ಸವದ ಚಂದವನ್ನವಲೋಕಿಸುವ ಕುತೂಹಲದಿಂದ ಶರೀರತಾಳಿ ತಾನೇ ಬಂದ ಕಾಮರಾಯನೋ ಎಂಬಂತೊಪ್ಪುವ ಮಾಧವನನ್ನು ಮನದಣಿಯುವಂತೆ ನೋಡಿದಂದಿನಿಂದಂತೂ ಅನುರಾಗವು ವಿಶೇಷವಾಗಿ, ಸಖಿಯ ಮುದ್ದುಮೊಗವು ಬಾಡಿ ಹೋಗಿರುವದು. ಇರುಳಲ್ಲಿ ಕ್ಷಣ ಹೊತ್ತು ಕಣ್ಣಿಗೆ ಕಣ್ಣು ಹಚ್ಚಿ ಎದ್ದಳೆಂದರೆ ಕನಸಿನಲ್ಲಿ ವಲ್ಲಭನನ್ನು ಕಂಡು ಭೋಗಹೊಂದಿದವಳಂತೆ ಎಲ್ಲ ಚಿಹ್ನಗಳನ್ನು ತೋರಿ, ಗೆಳತಿಯರನ್ನು ತನ್ನ ಕುಮಾರೀತನದ ಬಗ್ಗೆ ಸಂಶಯದಲ್ಲಿಕ್ಕುವಳು. ರಾತ್ರಿಯಾಯಿತೆಂದರೆ ನಮಗೆ ಬಹ ಳೇ ಕಷ್ಟವು; ಶರತ್ಕಾಲದ ಹುಣ್ಣಿವೆಯ ಬೆಳದಿಂಗಳಲ್ಲಿ ದ್ರವಿಸುವ ಚಂದ್ರಕಾಂತ ಮಣಿಯ ಹಾರವನ್ನು ಕೊರಳಲ್ಲಿ ಹಾಕಿ, ಪಚ್ಚ ಕರ್ಪೂರದಿಂದ ಮಿಶ್ರಿತವಾದ ಶ್ರೀಗಂಧವನ್ನು ಮೈಗೆತೊಡೆದು, ಎಳೆಬಾಳೆಯೆಲೆ ಮತ್ತು ಹಸಿಯ ಕಮಲಪತ್ರ ಮುಂತಾದವುಗಳಿಂದ ಮಾಡಿದ ಹಾಸಿಗೆಯ ಮೇಲೆ ಮಲಗಿಸಿ, ಬೀಸಣಿಕೆಯಿಂದ ಬೀಸಿದರೂ ರಾತ್ರಿಯೆಲ್ಲ ನಿದ್ದೆಗೇಡಾಗಿ ನರಳುವಳು. ಸ್ವಲ್ಪ ಜಂಪು ಹತ್ತುವಷ್ಟರಲ್ಲಿ ಮುಂಗಾಲಿಗೆ ಹಚ್ಚಿದ ಅಲತಿ ಗೆಯ ರಸವು ಸಹ ತೊಳೆದುಹೋಗುವಂತೆ ಮೈತುಂಬ ಬೆವರಿ ತಿಗಗಳು ನಡುಗಹತ್ತು ವವು. ಅದರುವ ಭುಜಗಳಿಂದ ಎದೆಯನ್ನು ಬಿಗಿದು ಅವಚಿ ಹೆದೆದೆಬ್ಬಿಸಿದವರಂತೆ ಬೆದಗೊಂಡು ತಟ್ಟನೆ ಎದ್ದು ಏನೋ ಹುಡುಕುವವಳಂತೆ ಅತ್ತಿತ್ತ ಕಣ್ಣು ತಿರಿವಿ ಆರ ನ್ನೂ ಕಾಣದೆ ಮರಳಿ ಕಣ್ಣುಮುಚ್ಚಿ ಮೂರ್ಛೆಬಿದ್ದು ಉಸಿರುಗರೆಯುವಳು. ದೇವನೇ! ನಮ್ಮನ್ನು ಭೂಮಿಗೆ ಭಾರವಾಗಿ ಏತಕ್ಕೆ ಇಟ್ಟಿರುವಿ, ಆಕೆಯ ಕಣ್ಣುಮುಂದೆ ನಮ್ಮ ನ್ನೊಯ್ಯಬಾರದೇ ಎಂದು ನಮಗೆ ಅನಿಸುವ ಹಾಗೆ ಮಾಡುವಳು. ತಾಯಿಾ! ಹೀಗೆಯೇ

ಕೆಲದಿನ ಹೋದರೆ ಏನು ಅನರ್ಥ ಒದಗುವದೋ ನೀವೇ ನೋಡಿರಿ; ನಾನಂತೂ ಮುಂ ದಿನ ಹಾದಿಯು ಕಾಣದ ಕುರುಡಳಂತೆ ಇದ್ದೇನೆ. ಇಕೋ! ಈ ಮಾಧವನ ಚಿತ್ರಪಟವು ಬಳಿಯಲ್ಲಿರದಿದ್ದರೆ ಈಕೆಯ ಜೀವವೇ ನಿಲ್ಲುವದಿಲ್ಲ. ಮಾಧವನು ತನ್ನ ನಿಜಕರದಿಂದ ರಚಿಸಿದ ಬಕುಲಹಾರವನ್ನಂತೂ ಆವಾಗಲೂ ಕೊರಳಲ್ಲಿ ಹಾಕಿಕೊಂಡು ತನ್ನ ಪಂಚ ಪ್ರಾಣವಂತೆ ಜತನವಾಗಿ ನೋಡಿಕೊಳ್ಳುತ್ತಾಳೆ". ಹೀಗೆಂದು ಚಿತ್ರಪಟವನ್ನೂ ಬಕುಲ ಹಾರವನ್ನೂ ಕಾಮಂದಕಿಗೆ ತೆರೆದು ತೋರಿಸಿ ಕಣ್ಣೀರು ಸುರಿಸಿದಳು.

ತಾನು ನೆನಿಸಿದವನಲ್ಲಿಯೇ ಮಾಲತಿಯ ಆಸಕ್ತಿಯುಂಟಾದುದನ್ನು ಕೇಳಿ ಕಾಮಂದ ಕಿಯು ಮನದಲ್ಲಿ ಆನಂದ ಪಟ್ಟರೂ, ಆಕೆಯ ದಾರುಣಾವಸ್ಥೆಯನ್ನು ನೋಡಿ ಮಿಡು ಮಿಡು ಮಿಡುಕಿದಳು. ಏಕಂದರೆ ಮಾಲತಿಯು ಹುಟ್ಟಾ ಎಳದೊಗಲಿನವಳಾದುದರಿಂದ ಮಾರನ ಕ್ರೂರವಾದ ಉರುಬೆಯನ್ನು ಸೈರಿಸಲಸಮರ್ಥಳಿದ್ದಳು. ಅದರಲ್ಲಿ ಋತುಕಾ ಲವಾದರೂ ಅನುಕೂಲವಿರಬಹುದೆಂದರೆ ಅದೂ ಇಲ್ಲ. ಪೂಗಣೆಯನ ಗೆಳೆಯನಾದ ವಸಂತರಾಯನು ಕಾಲಸೂತ್ರಗಳನ್ನು ಕೈಕೊಂಡು, ಕಾಮುಕರೆಂಬ ಹಗೆಗಳ ಮೇಲೆ ದಂಡೆತ್ತಿ ದಾಳಿಯು ಮಾಡುತ್ತಿದ್ದನು. ವಸಂತರಾಯನ ಅಪ್ಪಣೆಯಿಂದ ಮಲಯಾನಿಲನು ಬೀಸಲೆಸಗಿ ಮಾಮರದ ಮಕರಂದವೆಂಬ ಕಾಲಾಳುಗಳನ್ನು ಎಚ್ಚರಿಸಿ ಕಾಮಿ ಜನ ರನ್ನು ಕೊಳ್ಳೆಯಿಡುತ್ತಿದ್ದನು; ಚಂದ್ರಮನಂತೂ ತನ್ನ ಕಿರಣಗಳೆಂಬ ವಜ್ರಬಾಣ ಗಳನ್ನು ಹೊಯಿದು ಹೊಯಿದು ವಿರಹಿಗಳೆಂಬ ವೈರಿಗಳನ್ನು ನೆಲಕ್ಕೆ ಕೆಡಹುತ್ತಿದ್ದನು.

ಅಶೋಕ ಮರಗಳ ತಂಡದಲ್ಲಿ ಹೊಂಚುಹಾಕಿದ್ದ ಮಾಧವನು ಅವರ ಮಾತನ್ನೆಲ್ಲ ಕೇಳುತ್ತಲೇ ಇದ್ದನು. ಲವಂಗಿಕೆಯು ಕಾಮಂದಕಿಗೆ ತೋರಿಸುವದಕ್ಕಾಗಿ ಮಾಲತಿಯ ಸೆರಗನ್ನು ಓರೆಮಾಡಿದಾಗ ಕೊರಳಲ್ಲಿ ನೇಲಾಡುವ ಬಕುಲಮಾಲೆಯನ್ನು ನೋಡಿ ಮಾಲತಿಯ ವಿಕಾರವು ತನ್ನನ್ನೇ ಕುರಿತದ್ದೆಂದು ತಿಳಿದು ಅವನಿಗೆ ಆಶ್ವಾಸನಹುಟ್ಟಿತು.

ಈ ತೆರದಲ್ಲಿ ಕುಸುಮಾಕರವೆಂಬ ತೋಟದಲ್ಲಿ ಮಾತುಗಳು ನಡೆದಿರಲು ಶಂಕರನ ದೇವಾಲಯದ ನೆರೆಯಲ್ಲಿಯ ಅಂಗಳದಲ್ಲಿ ಒಂದು ಅತಿಘೋರವಾದ ಸಂಗತಿಯು ಒದ ಗಿತು. ಮಾಧವನ ಮೇಲೆ ಮಮತೆ ಮಾಡುವಂತೆ ಕಾಮಂದಕಿಯು ಅವನ ಗೆಳೆಯ ನಾದ ಮಕರಂದನ ಮೇಲಾದರೂ ಅಂತಃಕರಣ ಪೂರ್ವಕವಾಗಿ ನೇಹ ಮಾಡುತ್ತಿದ್ದಳು. ಒಂದು ಕಡೆ ಮಾಲತೀಮಾಧವರ ಕಳ್ಳಮದುವೆಯ ಉದ್ಯೋಗವನ್ನು ಹೇಗೆ ನಡಿಸಿದ್ದಳೋ ಹಾಗೆಯೇ ಮಕರಂದನನ್ನು ತಕ್ಕಕನ್ನಿಕೆಗೆ ಹೊಂದಿಸಬೇಕೆಂದು ಎರಡನೆಯ ಮಾರ್ಗ ದಿಂದ ವ್ಯವಸಾಯವನ್ನು ನಡಿಸಿದ್ದಳು. ನಂದನನಿಗೆ ಮದಯಂತಿಕೆಯೆಂಬ ಒಬ್ಬ ತಂಗಿಯು ಇದ್ದಳು. ಇವಳನ್ನು ಮಕರಂದನಿಗೆ ಮದುವೆ ಮಾಡಿಬಿಟ್ಟರೆ ಮಾಲತಿಯು ಮಾಧವನಿಗೆ ಅನಾಯಾಸದಿಂದ ದೊರೆಯ ಬಹುದೆಂದೆಣಿಸಿ, ತನ್ನ ಮತ್ತೊಬ್ಬ ಶಿಷ್ಯಳಾದ ಬುದ್ಧ ರಕ್ಷಿತೆಯೆಂಬವಳನ್ನು ಈ ಕೆಲಸಕ್ಕೆ ಹಚ್ಚಿದ್ದಳು. ಬುದ್ಧರಕ್ಷಿತೆಯಾದರೂ ಮದಯಂತಿ

ಕೆಯ ತೊತ್ತಾಗಲಿಕ್ಕೆ ಒಪ್ಪಿಕೊಂಡು, ಒಳ್ಳೇ ಹಂಚಿಕೆಯಿಂದ ಪ್ರಸಂಗವನ್ನನುಸರಿಸಿ ಆಯಾಮಾತುಗಳ ಸಂದರ್ಭದಲ್ಲಿ, ಮಕರಂದನು ಹಾಗಿರುವನು, ಹೀಗಿರುವನು, ಎಂದು ಅವನಗುಣಲಾವಣ್ಯಗಳನ್ನು ಬಣ್ಣಿಸಿ, ಪರೋಕ್ಷದಿಂದ ಮಕರಂದನ ಮೇಲೆ ಮದಯಂತಿಕೆಯ ಮೋಹವನ್ನುಂಟುಮಾಡಿದ್ದಳು. ಮಕರಂದನನ್ನು ಮದಯಂತಿಕೆಯು ಮೊದಲು ಎಂದೂ ನೋಡದಿದ್ದರೂ ಬುದ್ಧರಕ್ಷಿತೆಯ ಕುಶಲತನದ ಮಾತಿನಮೇಲಿಂದ ಅಂಥ ಚೆಲುವನೂ ಶೂರನೂ ಆದ ಪುರುಷನನ್ನು ನೋಡಬೇಕೆಂಬ ಲವಲವಿಕೆಯು ಆಕೆಯಲ್ಲಿ ಹುಟ್ಟಿತ್ತು. ಅಂಥ ಪ್ರಸಂಗವು ಕಾಲಯೋಗದಿಂದ ಈವೊತ್ತು ತಾನೇ ಒದಗಿ ಬಂತು. ಅದು ಹೇಗೆಂದರೆ:— ಕಾಮಂದಕಿ ಮುಂತಾದವರು ಶಿವಾಲಯದಲ್ಲಿ ಬಂದ ಸಮಯದಲ್ಲಿಯೇ ಮದಯಂತಿಕೆಯು ಶಂಕರನ ಆರಾಧನೆಗೆ ಹೋಗುವ ನಿಮಿತ್ತದಿಂದ ಬುದ್ಧರಕ್ಷಿತೆಯನ್ನು ಕರೆಯಿಸಿಕೊಂಡು ಅವಳೊಡನೆ ದೇಗುಲದ ಮಾರ್ಗಹಿಡಿದು ಹೊರಟು ಬಂದಳು. ಕುಸುಮಾಕರ ತೋಟದ ಸಮೀಪಕ್ಕೆ ಬರುವಷ್ಟರಲ್ಲಿ, ಬೀದಿಯ ಮಗ್ಗಲಿನಲ್ಲಿದ್ದ, ಮಠದೊಳಗಿಂದ, ಒಂದು ಹುಲಿಯು ಲೋಹಪಂಜರಕ್ಕೆ ಕಟ್ಟಿದ ಕಬ್ಬಿಣ ಸರಪಣಿಗಳನ್ನು ಪೈಕೊಪ್ಪಿನಿಂದ ಕಡಿದು ಚಲ್ಲಿ, ರೋಷದಿಂದ ಹೊರನುಗ್ಗಿ ಬಂಧನದಿಂದ ಬಿಡುಗಡೆಯಾದ ಹರುಷದಿಂದ ಉಬ್ಬಿದ ಬಾಲವನ್ನು ಮೇಲಕ್ಕೆ ನೆಗಹಿ, ಸಿಡಿಲಿನಬ್ಬರಣೆಯಿಂದ ಗುಡುಗುತ್ತ, ಕಡು ಆಡಂಬರದಿಂದ ಕಂಡವರ ಮೈಮೇಲೆ ಬರಹವಣಿಸಲು ಜನಸಂದಣಿಯು ದಿಕ್ಕುಗೆಟ್ಟು ಚದುರಿತು. ಆ ಕಾಲದಲ್ಲಿ ಬೆದರಿ ಓಡುವ ಜನರಲ್ಲಿ ಅಳವಿನೊಳಗೆ ಸಿಕ್ಕಿದವರ ಮೇಲೆ ಪುಟಿಸಿಗೆದು, ದವಡೆಗಳಲ್ಲಿ ಕಚ್ಚಿ, ಮಾಂಸವನ್ನು ಹರಿಹುಂಡು ಕಬಳಿಸುವಾಗ ಕಠಿಣವಾದ ಎಲುವುಗಳು ಹಲ್ಲುಗಳ ನಡುವೆ ಸಿಲುಕಿ ಕಟಕಟ ಎಂದು ಶಬ್ದಮಾಡುತ್ತಿದ್ದವು. ಮೊನೆಯಾದ ಪಂಜರದುಗುರಿನ ಪೆಟ್ಟಿನಿಂದ ಗಾಯಮಾಡಿ ಕೆಡಹಿದ ಅನೇಕ ನರತುರಂಗಗಳ ಕಂಡದಿಂದ ಗವಿಯೋಪಾದಿಯ ಬಾಯಿಯು ತುಂಬಿ, ಭಯಂಕರವಾದ ಕರಕರ ಎಂಬ ಸಪ್ಪಳವಾಗುತ್ತಿತ್ತು. ವಜ್ರದಂತೆ ಕಠೋರವಾದ ನಖಗಳನ್ನು ಶರೀರದಲ್ಲಿ ಕಚ್ಚನೆ ಚುಚ್ಚಿ ಚಿವರುವಾಗ ಬಳಬಳ ಸುರಿವ ನೆತ್ತರವು ಹರಿದು ಹೋಗಿ ಹಾದಿಯಲ್ಲಿ ಕೆಸರಾಗಿತ್ತು. ಅಕಟಕಟ! ಈ ದುಷ್ಟ ಶಾರ್ದೂಲವು ಮುಳಿದ ಕಾಲಯಮನಂತೆ ಹಾವಳಿಯುಮಾಡಿ ಎಣಿಕೆಯಿಲ್ಲದ ಪ್ರಾಣಹಿಂಸೆಯು ಮಾಡಿತಲ್ಲ!—ಎಂದು ಜನರೆಲ್ಲ ಮರಮರ ಮರುಗಿದರು. ಇಷ್ಟರಲ್ಲಿ ಆ ಕ್ರೂರವಾದ ವ್ಯಾಘ್ರವು ಬಿಸಿಬಿಸಿ ರಕ್ತವನ್ನು ಮನದಣಿಯುವಂತೆ ಕುಡಿದುದರಿಂದ ಸೊಕ್ಕೇರಿ ಆರನ್ನೂ ಲೆಕ್ಕಿಸದೆ ಬಳಿಯಲ್ಲಿ ಪರಿವಾರವನ್ನೆಲ್ಲ ದಿಕ್ಕುಪಾಲು ಮಾಡಿ ಅನಾಥಳಾದ ನಂದನನ ತಂಗಿಯಾದ ಮದಯಂತಿಕೆಯ ಮೇಲೆ ಸಾಗಿಹೋಯಿತು. ಇದನ್ನು ಕಂಡು, ದೂರದಲ್ಲಿ ಓಡಿಹೋಗಿದ್ದ ಬುದ್ಧರಕ್ಷಿತೆಯು—"ಅಯ್ಯೋ! ಇನ್ನೇನು ಗತಿ! ನನ್ನ ಪ್ರಿಯಸಖಿಯಾದ ಮದಯಂತಿಕೆಯನ್ನು ಉಳುಹಿಕೊಂಬುವರಾರೂ ಇಲ್ಲವಲ್ಲ!" ಎಂದು ಎದೆಬಡ

ಕೊಂಡು ಚೀರುತ್ತಾ ತಲೆಕೆದರುತ್ತಾ ಶಂಕರನ ಗುಡಿಯನ್ನು ಸೇರಲು, ಈ ಕೂಗನ್ನು ಕೇಳಿ ಕಾಮಂದಕೀ ಮಾಲತೀ ಲವಂಗಿಕೆಯರು—ಅಯ್ಯೋ ದೇವರೇ!—ಎಂದು ಗಡಬಡಿಸಿ ಎದ್ದರು ಮಾಧವನು ಅಡಗಿಕೊಂಡಿದ್ದರೂ ಈ ಪ್ರಸಂಗದಲ್ಲಿ ಪ್ರಕಟವಾಗುವದು ಉಚಿತವೆಂದೆಣಿಸಿ ಹೊರಕ್ಕೆ ಬಂದು—ಆ ಹುಲಿಯು ಎಲ್ಲಿರುವದು ಬೇಗ ಹೇಳು—ಎಂದು ಶಸ್ತ್ರಪಾಣಿಯಾಗಿ ಮುಂದ ಬಂದನು. ಹೀಗೆ ಆಕಸ್ಮಾತ್ತಾಗಿ ಬಂದ ಮಾಧವನನ್ನು ಕಂಡು ಮಾಲತಿಯು ಬೆರಗಾದರೂ ಹರುಷದಿಂದ ಮನದೊಳಗೆ—ಅಪ್ಪಯ್ಯಾ! ಇವರೂ ಇಲ್ಲೇ ಇರುವರು—ಎಂದು ಬಿರಿಬಿರಿ ಮಾಧವನನ್ನು ನೋಡಲು, ಮಾಧವನಿಗೆ ಹಾಲಿನ ಧಾರೆಯಿಂದೆರೆದು ಬೆಳ್ದಾವರೆಯ ದಟ್ಟವಾದ ಮಾಲೆಯಿಂದ ಬಿಗಿದು ಕಟ್ಟಿದಂತೆಯೂ ತಲೆಯ ಮೇಲೆ ಅಮೃತದ ಮಳೆಗರೆದಂತೆಯೂ ಆಯಿತು ಆ ಮೇಲೆ ಮಾಧವನು ಧೈರ್ಯದಿಂದ ಮುಂದುವರಿದು ನೋಡುತ್ತಾನೆ! ಹಾದಿಯಲ್ಲಿ ಹರಿದು ತುಂಡುತುಂಡಾದ ಕರುಳುಗಳಿಂದ ಸುತ್ತಿದ ಮುಂಡಗಳೂ, ಮುದುಡಿಮುದ್ದೆಯಾದ ರುಂಡಗಳೂ ಕಚಿಪಿಚಿಯಾಗಿ ಹರವಿ ಬಿದ್ದಿದ್ದವು; ರಕ್ತದ ಕೋಡಿಯು ಹರಿದು ಎಲ್ಲ ಕಡೆಯಲ್ಲಿ ಹರಡುಮುಟ್ಟ ರೊಜ್ಜಾಗಿದ್ದುದರಿಂದ ಹೋಗುವದಕ್ಕೆ ಅನುವಾಗದಿತ್ತು. ಇಷರಲ್ಲಿ ಆ ದುರುಳ ಹುಲಿಯು ದುರುಸಿನಿಂದ ದುಮ್ಮಿಕ್ಕಿ ಮದಯಂತಿಕೆಯು ಇದ್ದೆಡೆಗೆ ತೀರ ಸಮೀಪಿಸಿದುದನ್ನು ಕಂಡು—ಇನ್ನೇನು ಮದಯಂತಿಕೆಯ ಅವಸ್ಥೆಯು ಮುಗಿಯಿತು—ಎಂದು ಎಲ್ಲರೂ ಕನಿಕರದಿಂದ ಗೋಳಿಟ್ಟರು. ಆದರೆ "ದೈವಗತಿರ್ಬಲೀಯಸೀ" ಎಂಬ ನ್ಯಾಯದಂತೆ ಎತ್ತಲಿಂದಲೋ ಮಕರಂದನು ಓಡಿಬಂದು ನಡುವೆ ಸೇರಿ, ಸತ್ತುಬಿದ್ದ ಒಬ್ಬ ಪುರುಷನ ಕೈಯಿಂದ ಖಡ್ಗವನ್ನು ಸೆಳೆಯುವಷ್ಟರಲ್ಲಿ, ಹುಲಿಯು ಅರ್ಭಟಿಸಿ ಮಕರಂದನ ಮೇಲೆ ಜಿಗಿದು ಉಗ್ರವಾದ ಉಗುರುಗಳಿಂದ ಹೊಡೆಯಿತು. ಆದರೂ ಮಕರಂದನು ಎದೆಗುಂದದೆ ತಲೆಗೊಟ್ಟು ಆಯುಧವನ್ನು ಮೇಲಕ್ಕೆತ್ತಿ, ದಿಟ್ಟತನದಿಂದ ಹುಲಿಯ ಕುತ್ತಿಗೆಯನ್ನು ತುಂಡರಿಸಲು ದೊಪ್ಪನೆ ಹುಲಿಯು ನೆಲಕ್ಕುರುಳಿ ಬಿದ್ದಿತು. ಇದನ್ನು ನೋಡಿ "ಮಾರಿಯು ತಪ್ಪಿತು, ಮಾರಿಯು ತಪ್ಪಿತು" ಎಂದು ಎಲ್ಲರೂ ಹರುಷಗೊಂಡು ಚಪ್ಪಾಳೆಯ ಬಾರಿಸಿದರು. ಮಕರಂದನು ಮಾತ್ರ ಗಾಯಪಟ್ಟು ಪುಟಿವ ನೆತ್ತರದಿಂದ ಕಣ್ಣುಕತ್ತಿ ಕೆಳಗೆ ಬೀಳುತ್ತಿರಲು, ಮದಯಂತಿಕೆಯು ಗಾಬರಿಯಾಗಿ ಭುಜಗಳಿಂದ ಬಿಗಿದು ಹಿಡಿದಳು. ಇಷ್ಟರಲ್ಲಿ ಕಾಮಂದಕೀ ಮಾಧವ ಮುಂತಾದವರು ಸಮೀಪಕ್ಕೆ ಬಂದು "ಅಯ್ಯೋ ಮಕರಂದನು ಹುಲಿಯ ತಾಡನದಿಂದ ನಿಶ್ಚೇಷ್ಟನಾದನಲ್ಲ! ಇನ್ನೇನು ಮಾಡಬೇಕು" ಎಂದು ರೋದನ ಮಾಡಲಾರಂಭಿಸಿದರು. ತನ್ನ ಕೆಳೆಯನ ಅವಸ್ಥೆಯನ್ನು ನೋಡಿ ಮಾಧವನು ಸಹ ಹೌಹಾರಿ ಮೂರ್ಛೆಗೊಂಡನು.

( ಶಾರ್ದೂಲಪವಿದ್ರಾವಣವೆಂಬ ಮೂರನೆಯ ಅಧ್ಯಾಯವು )



## ೪ ನೆ ಅಧ್ಯಾಯವು.



ಹಿಂದೆ ಹೇಳಿದಂತೆ ಮಕರಂದಮಾಧವರ ಅವಸ್ಥೆಯನ್ನು ಕಂಡು ಎಲ್ಲರೂ ದಿಗಲು ಪಟ್ಟರು. ತನ್ನ ಸಲುವಾಗಿ ನಿಜಪ್ರಾಣವನ್ನು ಸಹ ಒತ್ತೆಯಿಟ್ಟು, ಅನಾಥಳಾದಂತಹಳನ್ನು ಕಾಪಾಡಿದನೆಂದು ಮದಯಂತಿಕೆಯು ಬಹುಪರಿಯಿಂದ ಮಕರಂದನ ಗುಣಗಳನ್ನು ಹೊಗಳಿ ಕಳವಳಿಸಿದಳು. ಮಾಲತಿಯು ಮಾಧವನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಪರಾಮರಿಸಿದಳು. ಮಾಲತೀಮದಯಂತಿಕೆಯರ ಜೀವನಾಶ್ರಯರಾದ ಮಾಧವ ಮಕರಂದರು ಹೀಗೆ ರಾಹುಗ್ರಸ್ತ ಸೂರ್ಯಚಂದ್ರರಂತೆ ಕಳೆಗುಂದಿ, ಹರಣ ಹಾರಿಬಿದ್ದಿರುವದನ್ನು ನೋಡಿ ಆರು ಕನಿಕರಪಡರು? ಹೀಗಾಗುವದೆಂದು ಕನಸುಮನಸಿನಲ್ಲಿ ಸಹ ಇದ್ದಿಲ್ಲ; ಆದರೂ ಕೆಲಸವು ಕೈಮೀರಿ ಹೋಗಿದ್ದಿಲ್ಲ. ಕಾಮಂದಕಿಯು ಎಲ್ಲರಿಗೂ ಸಮಾಧಾನ ಹೇಳಿ, ತನ್ನ ಕಮಂಡಲದೊಳಗಿನ ನೀರನ್ನು ಮಾಧವನ ಮೇಲೂ ಮಕರಂದನ ಮೇಲೂ ಚಿಮ್ಮಿಡಿಸಿ, ಸೆರಗಿನಿಂದ ಬೀಸಲಿಕ್ಕೆ ಹೇಳಿದಳು. ಮಾಲತೀಮದಯಂತಿಕೆಯರು ತುಸು ಹೊತ್ತು ಗಾಳಿಯ ಹಾಕಲಾಗಿ ಮಕರಂದನು ಎಚ್ಚತ್ತು ಕಣ್ಣು ತೆರೆದು "ಇದೇನು ಕೆಳೆಯನೇ, ನನಗೆ ಏನೂ ಆಗಿಲ್ಲ; ನೀನು ಹೀಗೇಕೆ ಗಾಬರಿಯಾಗಿರುವೆ?" ಎಂದು ಮಾಧವನ ಮೇಲೆ ಕೈಯಾಡಿಸಲು, ಮಾಧವನೂ ಚೇತರಿಸಿಕೊಂಡು ಮಕರಂದನನ್ನು ಅಪ್ಪಿದನು. ಎಲ್ಲರು ಒಳಿತಾಯಿತೆಂದು ಆನಂದಪಟ್ಟರು. ಮದಯಂತಿಕೆಯು ಮಕರಂದನನ್ನು ನೋಡಿದ್ದಿಲ್ಲವಾದ ಕಾರಣ ಮಕರಂದನಾರು ಮಾಧವನಾರು ಎಂಬದು ಅವಳಿಗೆ ಚೆನ್ನಾಗಿ ತಿಳಿದಿದ್ದಿಲ್ಲ. ಆದರೆ ಬುದ್ಧರಕ್ಷಿತೆಯು ಇವನೇ ಮಕರಂದನೆಂದು ಬೆರಳನ್ನು ತೋರಿಸಿ ಕಿವಿಯಲ್ಲಿ ಮೆಲ್ಲನೆ ಹೇಳಲು, ಮಕರಂದನು ತನಗೆ ಅಯೋಗ್ಯನಾದ ವರನಲ್ಲೆಂದು ಮನಗಂಡು ಹಿಗ್ಗಿ, ಮದಯಂತಿಕೆಯು ಅವನನ್ನೇ ಮಿಕಿಮಿಕಿ ನೋಡತೊಡಗಿದಳು. ಬಳಿಕ ಕಾಮಂದಕಿಯು ಮಾಧವಮಕರಂದರ ತಲೆಯಮೇಲೆ ಕೈಯಿಟ್ಟು ಹರಸಿ ಮಕರಂದ ಮದಯಂತಿಕೆಯರ ಪರಸ್ಪರ-ದರುಶನವು ದೈವಸಂಕಲ್ಪದಿಂದ ಒಳ್ಳೆಯ ಸಮಯದಲ್ಲಿ ಆದುದಕ್ಕೆ ಹರುಷಗೊಂಡು, ಮಕರಂದನನ್ನು ಕುರಿತು—"ಮಗನೇ ಮದಯಂತಿಕೆಯ ಜೀವವನ್ನು ಉಳಹುವದಕ್ಕೆ ಈ ಸಮಯದಲ್ಲಿ ನೀನು ಹೇಗೆ ಒದಗಿದೆ?" ಎಂದು ಕೇಳಲು, ಮಕರಂದನು—"ಈಹೊತ್ತು ನಾನು ನಗರದಲ್ಲಿ ತಿರುಗಾಡುವಾಗ ಮಾಧವನ ಅಂತಃಕರಣವನ್ನು ಕೊರಗಿಸುವ ಒಂದು ಹಾರಸುದ್ದಿಯನ್ನು ಕೇಳಿದೆನು. ನೀವೆಲ್ಲರು ಕುಸುಮಾಕರವೆಂಬ ತೋಟಕ್ಕೆ ಹೋಗಿದ್ದ ವಾರ್ತೆಯನ್ನು ಅವಲೋಕಿತೆಯಿಂದ ತಿಳಿದು, ಮಾಧವನ ವಿಷಯಕವಾದ ಸುದ್ದಿಯನ್ನು ತಿಳಿಸುವದಕ್ಕೆ ಜಾಗ್ರತೆಯಿಂದ ಬರುತಿರಲು, ಆ ದುಷ್ಟ ವ್ಯಾಘ್ರನ ಸಿಲುಕಿನಲ್ಲಿ ಸಿಲುಕಿದ ಈ ಕುಲಸಂಪನ್ನಳಾದ ಮಹಾನುಭಾವಳನ್ನು ನೋಡಿ ತ್ವರೆಮಾಡಿದೆನು." ಎಂದು ನುಡಿದನು. ಇದನ್ನು ಕೇಳಿ ಅಂಥ ಸುದ್ದಿಯು ಏನಿರಬಹುದೆಂದು ಮಾಲತೀಮಾಧವರು ಚಿಂತಿಸಹತ್ತಿದರು. ಪೊಲಬಿಗಳಾದ ಕಾಮಂದಕಿಯು ತಾನು

ಆ ಸಂಗತಿಯನ್ನು ಊಹಿಸಿಕೊಂಡರೂ ಅರಿಯದವಳಂತೆ ಮಾತು ಮರೆಯಿಸಿ ಮಾಧವನಿಗೆ– “ ಮಗುವೇ, ನಿನ್ನ ಕೆಳೆಯನಾದ ಮಕರಂದನು ಸುದೈವದಿಂದ ಒಳ್ಳೇ ಗಂಡತಪ್ಪಿ ಬದುಕಿದನೆಂದು ಮಾಲತಿಯು ಪ್ರೀತಿಯಿಂದ ನಿನಗೆ ಅಭಿನಂದನವ ಮಾಡುತ್ತಾಳೆ; ಅದಕ್ಕೆ ಮುಯ್ಯಕೊಡುವ ಸಮಯವು ಇದೇ. ” ಎಂದು ನುಡಿದಳು.

ಮಾಧವ—“ ಅಮ್ಮಾ ಗಾಯಪಟ್ಟ ಮಿತ್ರನ ಸಲುವಾಗಿ ಎದೆಗುಂದಿ ಎಚ್ಚರದಪ್ಪಿದ್ದಿರಲು ಪ್ರೇಮದಿಂದ ನನ್ನನ್ನು ಲಾಲಿಸಿ ಮನದ ದುಮ್ಮಳವನ್ನು ಹೋಗಲಾಡಿಸಿದಳು. ಆದುದರಿಂದ ನನ್ನ ಸರ್ವಸ್ವವೆಲ್ಲ ಆಕೆಯ ಆಧೀನದಲ್ಲಿಯೇ ಇದೆ. ಮಿಗಿಲಾದ ಮಾತಿನ ಫಲವೇನು! ನನ್ನ ಅಂತಃಕರಣವನ್ನೂ ಪ್ರಾಣವನ್ನೂ ಆಕೆಗೆ ಕಾಣಿಕೆಯಾಗಿ ಒಪ್ಪಿಸಿರುತ್ತೇನೆ. ” ಎಂದನು.

ಕಾಮಂದಕಿಯು ಹೀಗೆ ಮಾತು ಮರೆಯಿಸಿ ಆ ಸುದ್ದಿಯನ್ನು ಅಡಗಿಸಲಿಕ್ಕೆ ಹವಣಿಸಿದರೂ ಮಾಲತೀಮಾಧವರ ಹಂಬಲವು ಹೋಗಿದ್ದಿಲ್ಲ. ಮಾಧವನು ಮಕರಂದನ ಬಾಯಿಯಿಂದ ಸುದ್ದಿಯನ್ನು ಒಡೆಸಿ ಕೇಳಬೇಕೆಂಬ ಹಾರೈಕೆಯಿಂದ ಆತುರದ, ಪ್ರಶ್ನೆ ಮಾಡುವಷ್ಟರಲ್ಲಿ ನಂದನನ ಕಡೆಯಿಂದ ಒಬ್ಬ ಸೇವಕನು ಅವಸರದಿಂದ ಬಂದು– ಮದಯಂತಿಕೇ, ಜಾಗ್ರತೆಯಿಂದ ಮನೆಗೆ ನಡೆ. ನಿಮ್ಮ ಅಣ್ಣನಾದ ನಂದನನು ಈವೊತ್ತು ಕಡುಸಂಭ್ರಮದಲ್ಲಿರುವನು. ದೊರೆಗಳು ಇಂದು ತಾವೇ ನಮ್ಮ ಮನೆಗೆ ದಯಮಾಡಿಸಿ ಭೂರಿವಸುವಿನ ಮೇಲೆ ನಂಬುಗೆಯನ್ನೂ ನಮ್ಮ ಮೇಲೆ ಹಸಾದವನ್ನೂ ತೋರ್ಪಡಿಸಿ ಧನಿಯರಿಗೆ ಮಾಲತಿಯ ಪ್ರದಾನವನ್ನು ಸ್ವತಃ ಮಾಡಿ ಹೋದರು. ” ಎನಲು–ನಾನು ಕೇಳಿದ ಸುದ್ದಿಯೂ ಇದೇ,–ಎಂದು ಮಕರಂದನು ನುಡಿದನು. ಮದಯಂತಿಕೆಯ ಸಂತೋಷವು ಹಿಡಿಸದೇ ಹೋಯಿತು. ಆಕೆಯು ಮಾಲತಿಯನ್ನು ಮಿಗೆಹರುಷದಿಂದ ಬಿಗಿದಪ್ಪಿ “ ಸಖೀ ಮಾಲತೀ, ನಾವೀರ್ವರು ಚಿಕ್ಕಂದಿನಿಂದ ಈವರೆಗೆ ಒಂದೇ ಊರಲ್ಲಿ ವಾಸ ಮಾಡುತ್ತಿದ್ದು ಆಟನೋಟಗಳಲ್ಲಿ ಅಕ್ಕತಂಗಿಯರಂತೆ ಮಮತೆಯಿಂದ ನಲಿದಾಡುತ್ತಿದ್ದೆವು; ಈಗಲಂತೂ ನಮ್ಮ ಮನೆತನದ ಒಡೆಯಳಾದೆ. ನನ್ನ ಭಾಗ್ಯಕ್ಕೆ ಎಣೆಯುಂಟೇ? ಇನ್ನುಮೇಲೆ ಕಾಮಂದಕಿಯೂ ಲವಂಗಿಕೆಯೂ ನಮ್ಮವರೇ ಆದರು. ” ಎಂದು ಪರಮೋಲ್ಲಾಸದಿಂದ ಮದುವೆಯ ಏರ್ಪಾಟನ್ನು ಬಗೆಗೊಳಿಸುವದಕ್ಕೋಸುಗ ಬುದ್ಧಿವಂತೆಯೊಡನೆ ಹೊರಡಲುದ್ಯುಕ್ತಳಾಗಿ ಎದ್ದುನಿಂತಳು. ಕಾಮಂದಕೀಲವಂಗಿಕೆಯರು ಮನದಲ್ಲಿ ನೊಂದುಕೊಂಡರೂ— “ ನಿಮ್ಮ ಅಣ್ಣನಿಗೆ ಮಾಲತಿಯು ದೊರೆತುದರಿಂದ ನಮ್ಮೆಲ್ಲರ ಬಯಕೆಯು ಕೊನೆಗಂಡಿತು. ” ಎಂದು ನಾಲ್ಕು ಮೇಲುಪಚಾರದ ಮಾತುಗಳನ್ನಾಡಿದರು.

ಮದಯಂತಿಕೆಯು ಮಕರಂದನಿಗೆ ಪೂರಾ ವಶಳಾಗಿದ್ದಳು. ಹುಲಿಯನ್ನು ಕೊಂದು ತನ್ನ ಮೈಮೇಲೆ ಬಂದ ಪೀಡೆಯನ್ನು ತಪ್ಪಿಸಿ ಜೀವವನ್ನು ಉಳುಹಿದನಲ್ಲ!—ಎಂದು

ಮಕರಂದನ ಉಪಕಾರವನ್ನು ನೆನೆನೆನೆದು ಸ್ನೇಹಭಾವವನ್ನು ತನ್ನ ಕಣ್ಣಿನ ನೋಟದಿಂದ ವ್ಯಕ್ತಮಾಡಿದಳು. ಹುಲಿಯು ಹೊಡತದಿಂದ ಮಕರಂದನಿಗೆ ಗಾಯವಾಗಿ ನೆತ್ತರವು ಚಿಮ್ಮುವಾಗ ಮದಯಂತಿಕೆಯು ಬೆದರಿದ ಹುಲ್ಲೆಯಮರಿಯಂತೆ ಚಂಚಲವಾದ ನೇತ್ರಗಳನ್ನು ತಿರುವುತ್ತ ಕೆಳಗೆ ಜಾರಿಬಿದ್ದ ಸೆರಗನ್ನು ಸಹ ಲೆಕ್ಕಿಸದೆ ಮಕರಂದನನ್ನು ಕೋಮಲ ಬಾಹುಗಳಿಂದ ತಕ್ಕೈಸಿ ಆಸರ ಕೊಟ್ಟುದುವನ್ನು ಮಕರಂದನಾದರೂ ಹೇಗೆ ಮರೆಯುವನು? ಮದಯಂತಿಕೆಯ ಮೃದುವಾದ ಅವಯವಗಳ ದೃಢಾಲಿಂಗನವನ್ನು ಹೊಂದಿ ಮಕರಂದನು ಸಹ ಅವಳಿಗೆ ಮೋಹಿತನಾಗಿದ್ದನು. ಹೋಗಹೋಗುತ್ತ ಮದಯಂತಿಕೆಯು ಮಕರಂದನ ಚಿತ್ತವನ್ನು ಹುರುಳುಗೆಡಿಸುವಂತೆ ಹುಬ್ಬುಗಳನ್ನು ಸಿಂಗೆಗೆಡವಿ ಅಳುಕದ ರೆಪ್ಪೆಗಳುಳ್ಳ ತಾವರೆಗಂಗಳನ್ನು ಓರೆಮಾಡಿ ಮನದೊಳಗಿನ ಮೋಹವನ್ನು ಹೆಜ್ಜೆಹೆಜ್ಜೆಗೆ ಬೀರುತ್ತಾ—"ಬುದ್ಧರಕ್ಷಿತೇ, ನನ್ನ ಜೀವದಾನ ಕೊಟ್ಟ ಪುಂಡರೀಕಾಕ್ಷನನ್ನು ಮರಳಿ ಕಾಣುವೆನೇನೇ?" ಎಂದು ಮುದ್ದುಮುರುಕಿನಿಂದ ಮನೆಯ ದಾರಿಯ ಹಿಡಿದು ತೆರಳಿದಳು.

ಆದರೆ ನಂದನನ ಸುದ್ದಿಯು ಕಿವಿಯಲ್ಲಿ ಬಿದ್ದಕೂಡಲೇ ಮಾಧವನಿಗೆ ಮಾತ್ರ ಎದೆಯಲ್ಲಿ ಬಾಣನಟ್ಟಂತಾಯಿತು; ಮೋರೆಯು ಕಂದಿ ಕಪ್ಪಾಯಿತು; ಎದೆಯೊಡಕೊಂಡು ತೀರ ನಿರಾಶನಾದನು. ಮನದಲ್ಲಿ ಅಸ್ವಸ್ಥತೆಯುಂಟಾಗಿ—"ವಿಧಿಮದನರು ನನ್ನನ್ನು ಕಾಡಿಸಿಕಾಡಿಸಿ ಕೊಂದು ಧನ್ಯರಾಗಲಿ" ಎಂದು ಹುಚ್ಚನಂತೆ ಹಲುಬಿಕೊಂಡನು. ದುರ್ಲಭವಾದ ವಸ್ತುವಿಗೆ ಮೆಚ್ಚಿ ಅಪೇಕ್ಷೆಮಾಡಿದರೆ ಹೇಗೆ ತಾನೇ ದೊರಕುವದು? ಅದರಲ್ಲಿ ದೈವವು ಪ್ರತಿಕೂಲವಿದ್ದರಂತೂ ಕೆಲಸವೇ ಮುಗಿಯಿತು. ಮಾಧವನ ಆಶೆಗೆ ಎಳ್ಳಷ್ಟಾದರೂ ಎಡೆಯಿಲ್ಲದೆ ಹೋಯಿತು. ಮಾಧವನಂತೆ ಮಾಲತಿಗಾದರೂ ಆ ವಾರ್ತೆಯನ್ನು ಕೇಳಿ ಸಿಡಿಲುತಾಕಿದಂತಾಗಿ ಬೆಳಗು ಮುಂಜಾವಿನ ಮಿರುಪುಕುಗ್ಗಿದ ಚಂದಿರನಂತೆ ನೊಗವು ಸಪ್ಪಗಾಯಿತು. ಆಕೆಯ ಮ್ಲಾನಮುಖವನ್ನು ಕಂಡು ಮಾಧವನು ಎಷ್ಟು ಹಳಹಳಿಸಿರಬಹುದಲ್ಲ! ಇವರೀರ್ವರ ಈ ಪಡಿಪಾಟನ್ನು ನೋಡಿ ಕಾಮಂದಕಿಯು ಸಹ ತುಸು ಎದೆಕದಲಿದಳು. ಆದರೂ ಧೈರ್ಯತಾಳಿ—ಮಾಧವನೇ, ಭೂರಿವಸುವು ತಾನಾಗಿ ನಿನಗೆ ಮಾಲತಿಯನ್ನು ಕೊಡುವನೆಂದು ಎಣಿಸಿದ್ದಿಯೋ? ಇಲ್ಲ. ಹಾಗಾದರೆ ಈಗ ಬರಿದೆ ಕ್ಲೇಶ ಬಡುವದೇಕೆ? ಇನ್ನಾದರೂ ನಿನ್ನ ಕೋರಿಕೆಯು ಈಡೇರಲಿಕ್ಕಿಲ್ಲೆಂಬ ಹಾಗಿಲ್ಲ. ಏಕೆಂದರೆ ನಂದನನಿಗೋಸ್ಕರ ಮಾಲತಿಯನ್ನು ಪ್ರಭುಗಳು ಬೇಡಲು "ಮಹಾಸ್ವಾಮಿ, ತಮ್ಮ ಮಗಳನ್ನು ಪ್ರಭುಚಿತ್ತಕ್ಕೆ ಸರಿಯಾದ ವರನಿಗೆ ಕೊಡಬಹುದು" ಎಂಬು ಭೂರಿವಸುವು ನುಡಿದಿರುವನು. ಈಪೊತ್ತು ತಾವೇ ಸಮಕ್ಷ ದಯಮಾಡಿಸಿ ಮಾಲತಿಯ ಪ್ರದಾನ ಮಾಡಿದರೆಂದು ಆ ಪುರುಷನು ಬಂದು ಹೇಳಿದನು. ಮಗುವೇ, ಮನುಜರ ವ್ಯವಹಾರತಂತ್ರಗಳೆಲ್ಲ ಅವರ ನಾಲಗೆಯಮೇಲೆ ಅವಲಂಬಿಸಿರುತ್ತವೆ. ಬಾಯ್ನುಡಿಗಳಿಂದಲೇ ಪಾಪಪುಣ್ಯಗಳೆಲ್ಲ ಸಂಭವಿಸುವವು. ಭೂರಿವಸುವು ನುಡಿದದ್ದು ದಿಟವಾದರೂ

ಮಾಲತಿಯನ್ನು ಕುರಿತು ಸಟೆಯಾದದ್ದೇ ಸರಿ; ಮಾಲತಿಯು ದೊರೆಗಳ ನಿಜವಾದ ಮಗಳೂ ಅಲ್ಲ; ಹಾಗು ಮಾಲತಿಯನ್ನು ನಂದನನಿಗೆ ಕೊಡಲಿಕ್ಕೆ ದೊರೆಗಳಿಗೆ ಧರ್ಮಶಾಸ್ತ್ರದ ಒಪ್ಪಿಗೆಯೂ ಇಲ್ಲ. ಅಂದಬಳಿಕ ಆ ಮಾತಿನ ಗೊಡವೆಯೇ ನಮಗೆ ಬೇಡ. ಈ ನನ್ನ ನುಡಿಗಳಿಂದ ನಿನ್ನ ಹಂಬಲವು ನನಗಿಲ್ಲೆಂದು ಎಣಿಸುವೆಯೊ? ನಿನ್ನ ಸಲುವಾಗಿ ನನ್ನ ಪ್ರಾಣವನ್ನಾದರೂ ಎರವಿಟ್ಟು ನಿಮ್ಮೀರ್ವರ ಸಮಾಗಮವನ್ನು ಹೇಗಾದರೂ ಮಾಡಿಸುವೆನು. ಅದರ ಚಿಂತೆಯೇಕೆ? ನಿನ್ನ ವಿಯೋಗದಿಂದಾಗುವ ಹಾನಿಯು ಹಗೆಗಳಿಗೂ ಬೇಡ.— ಎಂದು ಮಾಧವನನ್ನು ಸಂತೈಸಿದಳು. ಸಂಸಾರವಿಮುಖಳಾದ ಕಾಮಂದಕಿಯು ತನ್ನ ಹೊಟ್ಟೆಯ ಮಕ್ಕಳಿಗಿಂತಲೂ ಮೇಲಾದ ವಾತ್ಸಲ್ಯವನ್ನು ಮಾಲತೀಮಾಧವರ ಮೇಲೆ ಮಾಡುವದನ್ನು ಕಂಡು ಆರ ಮನಸ್ಸು ಕರಗದು? ತಾನು ವಿರಾಗಿಯಾದರೂ ಕೈಲಾದ ಮಟ್ಟಿಗೆ ಯತ್ನಮಾಡಿ ಎತ್ತಿದ ಕೆಲಸವನ್ನು ಕೊನೆಗಾಣಿಸಲಿಕ್ಕೆ ಹವಣಿಸುತ್ತಿದ್ದಳು. ಇದುಮೀರಿ ದೈವಗತಿಯು ತಿರುಗಿದರೆ ಉಪಾಯವೇನು? ಇರಲಿ. "ಯತ್ನೇಕೃತೇಯದಿ ನಸಿಧ್ಯತಿಕೋತ್ರದೋಷಃ"

ಇಷ್ಟರಲ್ಲಿ ಭೂರಿವಸುವಿನ ಮಡದಿಯ ಕಡೆಯಿಂದ ಒಬ್ಬ ಸೇವಕನು ಬಂದು ಮಾಲತಿಯನ್ನು ಕರಕೊಂಡು ಬರಲಿಕ್ಕೆ ರಾಣಿಯವರ ಅಪ್ಪಣೆಯಾಗಿರುವದೆಂದು ಕಾಮಂದಿಕಿಗೆ ಬಿನ್ನವಿಸಿದನು. ಮಾಲತಿಯು ಹೋಗುವಳೆಂದೂ ಮರಳಿ ಆಕೆಯ ಮುಖವನ್ನು ತಾನು ನೋಡುವದಿಲ್ಲೆಂದೂ ತಿಳಿದು ಮಾಧವನು ತೀರ ನಿರಾಶನಾದುದರಿಂದ ಅವನಿಗೆ ಬಹಳ ಕಷ್ಟವಾಯಿತು. ಮೊದಲು ದೈವವು ಮಿತ್ರನಂತೆ ಅನುಕೂಲತೆಯನ್ನು ತೋರಿಸಿ ಸುಖಪಡಿಸಿತ್ತು; ಆದರೆ ಹಿಂದಿನಿಂದ ಒಮ್ಮೆಲೆ ತಿರುಗಿ ಬಿದ್ದು ಹಗೆತನವ ಪ್ರಕಟಮಾಡಿದುದನ್ನು ಕಂಡು ಮಾಧವನು ಮರುಗಿದನು, ಮಾಲತಿಗಂತೂ ಕಪೋತಗಿರಿಯೇ ಕಡಕೊಂಡು ಬಿದ್ದಂತಾಯಿತು, ಆಕೆಯು ಜೀವದ ಆಶೆಯನ್ನೇ ತೊರೆದಳು. ಮಾಧವನಿಗೆ ದೈವವೊಂದೇ ಪ್ರತಿಕೂಲವಾಗಿತ್ತು. ಇವಳಿಗೆ ತಂದೆಯು ಸಹ ಕಟುಕನಾದುದರಿಂದ ಪಾಪ! ಆರನ್ನು ಮೊರೆಹೊಗುವಳು? ಆರಿಗೆ ಬಾಯಿತೆರೆವಳು? ಕಡೆಗೆ ಮಾಲತಿಯು ನಿರುಪಾಯಳಾಗಿ ಕಾಮಂದಕೀಲವಂಗಿಕೆಯರೊಡನೆ ಹೊರಟುಹೋದಳು.

ಮಾಧವನಿಗಾದರೂ ಕಾಮಂದಕಿಯ ಮಾತಿನಲ್ಲಿ ಪೂರಾ ನಂಬುಗೆ ಕೂಡಲಿಲ್ಲ. ಮಾಲತಿಯು ದೊರೆತರೆ ಒಳ್ಳೇದು, ಇಲ್ಲವಾದರೆ ಬದುಕಿದ್ದು ಫಲವಿಲ್ಲೆಂದು ತಿಳಿದು ಪಿಶಾಚಿಗಳಿಗೆ ನರಮಾಂಸವಿಕ್ರಯ ಮಾಡುವನೆವದಿಂದ ದೇಹತ್ಯಾಗ ಮಾಡಬೇಕೆಂದು ಮನದಲ್ಲಿ ನಿಶ್ಚಯಮಾಡಿಕೊಂಡನು. ಆದರೆ ಮಕರಂದನಿಗೆ ಈಮಾತು ತಿಳಿದರೆ ತನ್ನ ಮನೋಗತವು ಕಡೆಗಾಣಲಿಕ್ಕಿಲ್ಲೆಂದೆಣಿಸಿ ಅವನಿಗೆ ತನ್ನ ಗುಟ್ಟನ್ನು ಹೇಳದೆ ಬೇರೆಮಾತಿನ ಪ್ರಸಂಗವನ್ನು ತೆಗೆದು ಪಟ್ಟಣದ ಮಾರ್ಗಹಿಡಿದು ಮಕರಂದನ ಕೂಡ ನಡೆದನು. ಹಾದಿಯಲ್ಲಿ ಪಾರಾಸಿಂಧುನದಿಗಳ ಸಂಗಮವು ಹತ್ತಿತು, ಆ ತೀರ್ಥದಲ್ಲಿ ಮುಳುಮುಳುಗಿ

ಏಳುವ ಅನೇಕ ತರುಣಿಯರು ತಮ್ಮ ತುಂಗವಾದ ಕುಚಕಲಶಗಳನ್ನು ಎರಡೂ ಕೈಗಳಿಂದ ಮರೆಮಾಡಿ, ತೊಯಿದ, ಸೀರೆಗಳು ಮೈಗೆ ಅಂಟಿಕೊಂಡುದುದರಿಂದ ಸ್ಪಷ್ಟವಾಗಿ ಕಾಣಿಸುವ ಶರೀರವನ್ನು ಮುಚ್ಚಿಕೊಳ್ಳಲಾರದೆ ನಾಚಿಕೆಯಿಂದ ಮೋರೆತಗ್ಗಿಸುವ ಶೃಂಗಾರವನ್ನೆಲ್ಲ ಅವಲೋಕಿಸುತ್ತ ತಾವೂ ಆ ಸಂಗಮದಲ್ಲಿ ಮಿಂದು ಮಾಧವಮುಕರಂದರು ಪೊಳಲ ಪೊಕ್ಕರು.

(ಶಾರ್ದೂಲವಿಭ್ರಮವೆಂಬ ನಾಲ್ಕನೆಯ ಅಧ್ಯಾಯವು)

---

## ೫ ನೆಯ ಅಧ್ಯಾಯವು



ಮರುದಿವಸ ಅಮಾವಾಸಿಯಾಗಿತ್ತು. ಸೂರ್ಯನು ತನ್ನ ನಿತ್ಯದ ದುಡಿತದಿಂದ ಬೇಸತ್ತು ದಣವಾರಿಸಿಕೊಳ್ಳುವದಕ್ಕಾಗಿ ಹೊಂಬಣ್ಣದ ಕಿರಣಗಳನ್ನು ತೊಟ್ಟು ಅಸ್ತಾಚಲವನ್ನೇರಿದನು. ಆಗಸದಲ್ಲೆಲ್ಲ ಕೆಂಪಡರಿತು. ಕೆಲಪೊತ್ತಿನಮೇಲೆ ಬಿರುಸಾದ ಸಂಜೆಯ ಸುಳಿಗಾಳಿಯು ಬೀಸಲೆಸಗಿ ಕಾರ್ಮೋಡಗಳು ನಭೋಮಂಡಲವನ್ನು ಮುಸುಕಿದವು. ಭೂದೇವಿಯು ಕರೇಚಂದ್ರಕಳೆಯ ಸೀರೆಯುನ್ನುಡುವಳೋ ಏನೋ ಎಂಬಂತೆ ದಟ್ಟವಾದ ತಮಾಲ ವೃಕ್ಷಗಳ ನೀಲವರ್ಣವನ್ನು ಹೋಲುವ ಕತ್ತಲೆಯು ನಾಲ್ಕೂಕಡೆಯಲ್ಲಿ ಕವಿಯಹತ್ತಿತು. ಇರುಳಿನ ಮೊದಲಿನ ಜಾವವು ಈಗೀಗ ಪ್ರಾರಂಭವಾಗಿದ್ದರೂ ವನವೆಲ್ಲ ಭಯಂಕರವಾಗಿ ತೋರುತ್ತಿತ್ತು. ಕಾಡಿನಲ್ಲಿ ಗೂಬೆಗಳ "ಘೂ ಘೂಕ್" ಎಂಬ ಕರ್ಕಶವಾದ ಶಬ್ದವು ದೂರಿನಿಂದ ಕೇಳಬರುತ್ತಿತ್ತು. ನರಿಗಳೂ ತೋಳಗಳೂ ಮಸಣಗಾಡಿನ ನಡುವೆ ಹರಿಯುವ ಹೊಳೆಯ ತಟಾಕಿನಲ್ಲಿ ಹಿಂಡುಗಟ್ಟಿ ಬೊಬ್ಬಿಡುವದರಿಂದ ಕೇಳುವವರಿಗೆ ಹೆದರಿಕೆಯುಂಟಾಗುತ್ತಿತ್ತು. ನೀರಲ್ಲಿ ತೇಲಾಡುವ ನೂರಾರು ತಲೆಬುರುಡೆಗಳು ಹೊಳೆಯ ಸೆಳವಿನಿಂದ ದಡದ ಬಂಡಿಗೆ ಅಪ್ಪಳಿಸಿ ಒಡೆದು ನೀರುತುಂಬ ಮುಳುಗುವಾಗ ಉಂಟಾದ ಘೋರವಾದ ಸಪ್ಪಳವು, ನದಿಯ ಪ್ರವಾಹದ ಧೋ-ಧೋ ಎಂಬ ಭಯಂಕರ ಶಬ್ದದಿಂದ ಕೂಡಿ, ಅಡವಿಯಲ್ಲಿ ತುಂಬಿಕೊಂಡುದುದರಿಂದ ಹಾದಿಕಾರರ ಮೈಮೇಲೆ ಮುಳ್ಳುಬಂದು ಅವರು ಎದೆಯೊಡಕೊಳ್ಳುತ್ತಿದ್ದರು. ಕೌಟಾದ ಎಣ್ಣೆಯಲ್ಲಿ ಕರಿದ ಬೆಳ್ಳುಳ್ಳಿಯಂತೆ ದುರ್ಗಂಧಮಯವಾದ ನಾತವು, ಕಾಡಿನಲ್ಲಿ ಉರಿವ ಚಿತೆಗಳಿಂದ ಹೊರಟು ಎಲ್ಲಕಡೆಯಲ್ಲಿ ಸುತ್ತಿಕೊಂಡುದುದರಿಂದ ಬಳಿಯಲ್ಲಿಯೇ ಮಸಣಗಟ್ಟೆಯಿರುವದೆಂದು ಹೇಳದೆ ಗೊತ್ತಾಗುವಂತಿತ್ತು.

ಇಂಥ ಭಯಾನಕವಾದ ಪ್ರದೇಶದಲ್ಲಿ ಒಬ್ಬ ದಿಟ್ಟಪುರುಷನು ಬಿಚ್ಚುಗತ್ತಿಯನ್ನು ಕೈಯಲ್ಲಿ ಹಿಡಿದು ಉದ್ದವಾದ ತಲೆಗೂದಲುಗಳನ್ನು ಒಗ್ಗಟ್ಟಾಗಿ ಬಿಗಿದುಕಟ್ಟಿ, ಸ್ಮಶಾನದ

ಮಾರ್ಗವನ್ನು ಹಿಡಿದು ಸಾಗಿದ್ದನು. ಇವನ ಶರೀರವು ನೀಲಕಮಲದಂತೆ ಕಪ್ಪುಬಣ್ಣದ್ದಾಗಿದ್ದರೂ ಏನೋ ಕಾರಣದಿಂದ ಬಿಳುಪಾಗಿ ತೋರುತ್ತಿತ್ತು. ಇವನ ಗಂಭೀರವಾದ ನಡೆಯ ಮೇಲಿಂದ ಆವುದೋ ಒಂದು ಸಾಹಸ ಕಾರ್ಯವನ್ನು ಮನದಲ್ಲೆಣಿಸಿರುವನೆಂದು ತಿಳಿಯುವಂತಿತ್ತು. ಎಡಗೈಯಲ್ಲಿ ನರಮಾಂಸವಿದ್ದುದರಿಂದ ನೆತ್ತರವು ಸೋರಿ ಕೈಯೆಲ್ಲ ಜಿಗಟಾಗಿತ್ತು. ಈ ಪುರುಷನಾರೆಂಬದು ಹೇಳಲವಶ್ಯವಿಲ್ಲ. ಇವನೇ ಮಾಲತಿಯ ಸಲುವಾಗಿ ನಿರಾಶನಾಗಿ ನರಮಾಂಸವನ್ನು ಭೂತಪಿಶಾಚಿಗಳಿಗೆ ಬಲಿಕೊಡಲೋಸುಗ ಬಂದ ಮಾಧವನು. ಮಾಧವನು ತನ್ನ ಮನೋವಲ್ಲಭೆಯ ಪೂರ್ವದ ಸ್ನೇಹವನ್ನೂ ಆಕೆಯ ಪರಿಪರಿಯ ಶೃಂಗಾರ ಚೇಷ್ಟೆಗಳನ್ನೂ ಧ್ಯಾನಿಸಿ ಪುನಃ ತನಗೆ ಆಕೆಯ ದರುಶನವಾಗಿ ತಾನು ಅಂಥ ಮಧುರವಾದ ಹಾವಭಾವಗಳನ್ನು ಮರಳಿ ಕಾಣುವದೇ ದುರ್ಲಭವೆಂದು ನೆರೆನಂಬಿ, ಇಂಥ ಸಾಹಸಕ್ಕೆ ಉಜ್ಜುಗಿಸಿದ್ದನು. ಮಕರಂದನೋಸುಗ ಎಚ್ಚರದಪ್ಪಿ ಬಿದ್ದಿರಲು ಮಾಲತಿಯು ಮಾಧವನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಲಾಲಿಸಿದ್ದಳು; ಅದನ್ನು ಈಗ ತಿರುಗಿ ಬಯಸಿದರೆ ದೊರೆಯಬಹುದೋ? ಇದಂತು ಒಂದುಕಡೆ ಇರಲಿ. ಬಾಲಚಂದಿರನ ಸೊಬಗಿನಿಂದ ಕಂಗೊಳಿಸುವ ಅವಳ ಮೊಗವಾದರೂ ಒಂದು ಅರಗಳಿಗೆ ತನ್ನ ಕಣ್ಣಿಗೆ ಬಿದ್ದರೆ ಸಾಕು ಎನ್ನುವಂತೆ ಮಾಧವನಿಗಾಗಿತ್ತು. ಆನರೆ ಇದೆಲ್ಲ ಮಾಧವನ ಕೇವಲ ಭ್ರಾಂತಿಯೇ ಸರಿ. ತುಸುಹೊತ್ತು ಆಕೆಯ ಮೋರೆಯ ಕಂಡರೆ ಮಾಧವನಿಗಾಗುವ ಹೆಚ್ಚಿನ ಲಾಭವೇನು? ಪೂರ್ವದ ಸಂಸ್ಕಾರದಿಂದಲೂ, ಅವಳ ನಿತ್ಯದ ಸ್ಮರಣೆಯಿಂದಲೂ, ಮಾಧವನ ಚಿತ್ತವೆಲ್ಲ ಮಾಲತೀಮಯವಾಗಿತ್ತು. ಮಾಧವನ ಅಂತಃಕರಣದಲ್ಲಿ ಮಾಲತಿಯ ರೂಪವು ಪ್ರತಿಬಿಂಬಿಸಿದಂತೆಯೂ, ಬರೆದಂತೆಯೂ, ಕೆತ್ತಿದಂತೆಯೂ, ನೆಡಿಸಿದಂತೆಯೂ, ವಜ್ರಲೇಪದಿಂದ ಕೂಡಿಸಿದಂತೆಯೂ, ಹೂಳಿಟ್ಟಂತೆಯೂ, ಕಾಮನ ಐದು ಸರಳುಗಳಿಂದ ಕೀಲಿಸಿದಂತೆಯೂ, ಚಿಂತೆಯೆಂಬ ತಂತುವಿನಿಂದ ಬಿಗಿಯಾಗಿ ಪೋಣಿಸಿದಂತೆಯೂ ನಾನಾ ಬಗೆಯಿಂದ ಏಕಮಯವಾಗಿದ್ದದರಿಂದ ಅವಳ ಪ್ರತ್ಯಕ್ಷ ದರುಶನದ ಕಾರಣವೇ ಇದ್ದಿಲ್ಲ. ಹೀಗೆ ಮಾಲತಿಯೋಸುಗ ಮಾಧವನ ಪ್ರೇಮವು ಸ್ಥಿರಪಟ್ಟದ್ದರಿಂದ ಮುಂದಿನ ಕರ್ತವ್ಯವು ತೋಚದೆ, ಮಹಾಮಾಂಸವನ್ನು ಪಿಶಾಚಗಳಿಗರ್ಪಿಸಿ ತಾನು ಅಳಿಯಬೇಕೆಂಬ ಯೋಚನೆಯಿಂದ ಮುಂದೆ ನಡೆದು ಸ್ಮಶಾನಪ್ರದೇಶವನ್ನು ಪೊಕ್ಕನು.

ಆ ಸ್ಮಶಾನದಲ್ಲಿ ಎಷ್ಟೋ ಕುಳ್ಳುತಾಳಿಗಳು ಉರಿಯುತ್ತಿದ್ದವು. ದಟ್ಟವಾದ ಕಗ್ಗತ್ತಲೆಯು ಸುತ್ತಲು ಹಬ್ಬಿದುದರಿಂದ ಚಿತಾಜ್ವಾಲೆಯ ಬೆಳಕು ಮತ್ತೂ ಹೆಚ್ಚಿ, ಎಡಬಲದ ಪ್ರದೇಶವು ಕಣ್ಣಿನಲ್ಲಿ ಬೆರಳು ಚುಚ್ಚಿಕೊಂಡರೂ ಕಾಣದಹಾಗಾಗಿತ್ತು. ಅಡವಿಯ ನರಿನಾಯಿಗಳು ಸುತ್ತುಮುತ್ತಲೂ ನೆರೆದು ಕೋಲಾಹಲವನ್ನು ಮಾಡುತ್ತಿದ್ದವು. ಅಲ್ಲಿ ಮನೆಮಾಡಿಕೊಂಡಿದ್ದ ಭೂತಪ್ರೇತಪಿಶಾಚಗಳು ಸಹ ಆನಂದದಿಂದ ಕುಣಿದಾಡುತ್ತ, ಚೀರಧ್ವನಿಯಿಂದ ಕೂಗಿ ಕೂಗಿ ತಮ್ಮ ಬಳಗದವರನ್ನು ಕರೆಯುತ್ತಿದ್ದವು. ಮಾಧವನು

ಲೇಶವಾದರೂ ಹೆದರದೆ ಧೈರ್ಯದಿಂದ ಮುಂದೆ ಹೆಜ್ಜೆಯಿಟ್ಟು—"ಎಲೈ! ಸ್ಮಶಾನದಲ್ಲಿರುವ ಪಿಶಾಚಿಗಳಿರಾ, ಮನುಷ್ಯದೇಹದ ಶುದ್ಧವಾದ ಮಹಾಮಾಂಸವನ್ನು ನಿಮಗರ್ಪಿಸಲಿಕ್ಕೆ ತಂದಿರುವೆನು, ದಯಮಾಡಿ ಕೈಕೊಳ್ಳಿರಿ'' ಎಂದು ಗಟ್ಟಿಯಾಗಿ ಕೂಗಿದನು. ಈ ಕೂಗನ್ನು ಕೇಳಿದಕೂಡಲೆ ಎಲ್ಲಕಡೆಯಿಂದಲೂ ಪಿಶಾಚಿಗಳು ನೆರೆದು, ನಾ ಮುಂದೆ ನೀ ಮುಂದೆ ಎಂದು ಅಸ್ಪಷ್ಟವಾದ ಕಿಲಿಕಿಲಿ ಶಬ್ದದಿಂದ ಮಾಧವನನ್ನು ಸುತ್ತುಗಟ್ಟಿದವು.

ಈ ಪಿಶಾಚಿಗಳ ಸ್ವರೂಪಗಳೂ ಕೃತಿಗಳೂ ಬಣ್ಣಿಸತಕ್ಕಂಥವಿದ್ದವು. ಕೆಲವುಗಳ ಕಟವಾಯಿಗಳು ಹರಿದು ಕಿವಿವರೆಗೆ ತೆರೆದಿದ್ದರಿಂದ, ಮೊನೆಯಾದ ಕೋರೆದಾಡೆಗಳು ಮುಂದೆ ಹಾದಿದ್ದವು. ಕೆಲವುಗಳ ಬಾಯಿಯಿಂದ ಉರಿಯು ಹೊರಡುತ್ತಿತ್ತು. ಕೆಲವುಗಳ ಉದ್ದವಾದ ಚಂಡಿಕೆಗಳೂ ಮೀಶೆಗಡ್ಡಗಳೂ ಹುಬ್ಬುಗಳೂ ಬೆಂಕಿಯಂತೆ ಹೊಳೆಯುತ್ತಿದ್ದವು. ಕೆಲವುಗಳ ಮೈಯಲ್ಲಿ ಬರಿ ಎಲುವುಗಳೇ ಇದ್ದವು. ಕೆಲವುಗಳ ಕಾಲುಗಳು ತಾಳೇಮರದಷ್ಟು ಎತ್ತರವಾಗಿದ್ದು ತೀರ ಸಣ್ಣಾಗಿದ್ದುದರಿಂದ ಗಡುತರವಾದ ಮೊಣಕಾಲು ಗಡ್ಡಿಗಳೇ ಕಾಣುತ್ತಿದ್ದವು. ಕೆಲ ಭೂತಗಳು ಕಂಗಾಲತನದಿಂದ ಹಿಡಿಸದಷ್ಟು ಕಂಡವನ್ನು ಬಾಯಿಯಲ್ಲಿ ಅವಸರದಿಂದ ತುರುಕುವಾಗ ಅರೆಪಾಲು ಮಾಂಸವು ಕೆಳಗೆ ಜಾರಿಬಿದ್ದು ನರಿನಾಯಿಗಳಿಗೆ ಹೊಟ್ಟೆತುಂಬ ಅನ್ನವಾಗುತ್ತಿತ್ತು. ಕೆಲವು ಪ್ರೇತಗಳು ಸುಟ್ಟುಕರಕಾದ ತಮ್ಮ ಉದ್ದ ನಾಲಿಗೆಗಳನ್ನು ಹೊರಚಾಚಿ ಅಲ್ಲಾಡಿಸುವಾಗ, ಹುತ್ತಿನಹೊರಗೆ ತಲೆಹಾಕಿ ಹೆಡೆಯಾಡಿಸುವ ಕರೇನಾಗರಹಾವಿನಂತೆ ಅವು ತೋರುತ್ತಿದ್ದವು. ಮಾಧವನು ತುಸು ಮುಂದೆ ಹೋಗಿ ನೋಡುತ್ತಾನೆ! ಅಲ್ಲಿ ಇದಕ್ಕೂ ಹೆಚ್ಚಿನ ಹೇಸಿಗೆಬರುವ ಕೆಲಸವು ನಡೆದಿತ್ತು. ಹಸಿದು ಬರೆಗೆಟ್ಟ ಒಂದು ದೆವ್ವವು ಅಲ್ಲಿ ಬಿದ್ದಿರುವ ಹೆಣಗಳ ಮೇಲ್ತೊಗಲನ್ನು ಹರಿಹರಿದು, ರಟ್ಟೆ-ತೊಡೆ-ತಿಗ-ಮೀನಗಂಡ ಮೊದಲಾದ ಉಬ್ಬಿದವಯವಗಳೊಳಗಿನ ಕೊಳಕುನಾರುವ ಮಾಂಸದ ಮುದ್ದಿಯನ್ನು ಗಪಗಪಾ ನುಂಗಿ, ಇನ್ನೂ ಸಾಲದೆ ತಲೆಬುರುಡೆಗಳೊಳಗೆ ಕೈಸೇರಿಸಿ ಕಣ್ಣು ಮಿದುಳುಗಳನ್ನು ಕಿತ್ತುಹಾಕಿ ಎಲುವುಗಳಿಗೆ ಹತ್ತಿದ ಮಾಂಸವನ್ನು ಹಲ್ಲುಗಿಟಕರಿಸಿ ತಿಣತಿಣಕಿ ಜಗ್ಗಿ ಹರಿದು ಬಕ್ಕರಿಸುತ್ತಿತ್ತು. ಹಲವು ಭೂತಗಳು ತಾಳಿಯಕಿಚ್ಚಿನೊಳಗಿಂದ ಅರ್ಧಮರ್ಧ ಬೆಂದ ಹೆಣಗಳನ್ನು ಎಳೆದು ಕುದಿವ ನೆಣಕಂಡಗಳನ್ನು ಮೊಣಕಾಲುಪರಟೆಯಿಂದ ಬಿಡಿಸಿ, ಕೀಲುಗಳನ್ನು ಪಿಂಗಡಿಸಿ, ಪೊಳ್ಳುನಳಿಗಳಿಂದ ಸೋರುವ ಬಿಸಿಬಿಸಿ ಮಜ್ಜೆಯನ್ನು ಬಾಯಿ ಚಪ್ಪರಿಸಿ ಸೀಪುತಿದ್ದವು. ಹೆಣ್ಣುಪಿಶಾಚಿಗಳ ಸಂಭ್ರಮದ ಕುಣಿದಾಟವನ್ನು ನೋಡಿದರಂತೂ ನಗೆಬರುವಹಾಗಿತ್ತು. ಕರಳುಗಳು ಎಳೆಗಳಿಂದ ಮುಂಗಳಸೂತ್ರವನ್ನು ಮಾಡಿಕೊಂಡಿದ್ದವು. ನೆತ್ತರದಿಂದ ಕೆಂಪಾದ ಸ್ತ್ರೀಹಸ್ತಗಳನ್ನು ಬಂಡಿಗಾಲಿಯಷ್ಟು ಅಗಲಾದ ಕಿವಿಯಾಲೆಯಲ್ಲಿ ಸೇರಿಸಿದ್ದುದರಿಂದ ಕೆಂದಾವರೆಯ ಭೂಷಣವನ್ನಿಟ್ಟಂತೆ ಕಾಣಿಸುತ್ತಿದ್ದವು. ಕೊರಳಲ್ಲಿ ಜೋತು ಬಿಟ್ಟಿದ್ದ ಬಿಳುಪಾದ ಕಳಿಜಗಳ ಸರಗಳು ಪುಂಡರೀಕ

ಮಾಲೆಗಳಂತೆ ಒಪ್ಪುತ್ತಿದ್ದವು. ನೊಸಲಲ್ಲಿ ರಕ್ತದ ಬೊಟ್ಟನ್ನು ಕುಂಕುಮತಿಲಕವೆಂದು ಇಟ್ಟುಕೊಂಡಿದ್ದವು. ತಲೆಪರಟೆಗಳಲ್ಲಿ ಕರಗಿದ ನೆಣವನ್ನೂ ಮಜ್ಜೆಯನ್ನೂ ಸುರುವಿ ತಮ್ಮ ತಮ್ಮ ಗಂಡಂದಿರೊಂದಿಗೆ ಕುಡಿದು ತೃಪ್ತವಾಗಿ ಆನಂದದಿಂದ ಚೀರಾಡುತ್ತಿದ್ದವು.

ಈ ಎಲ್ಲ ಚಮತ್ಕಾರವನ್ನು ನೋಡುತ್ತ ಮಾಧವನು ಅತ್ತಿತ್ತ ತಿರುಗಾಡುತ್ತ ದೀರ್ಘಧ್ವನಿಯಿಂದ—"ಎಲೈ! ಮಸಣಗಟ್ಟೆಯ ಭೂತಗಳಿರಾ, ನಿಮಗೋಸ್ಕರ ಮನುಷ್ಯ ದೇಹದ ಶುದ್ಧವಾದ ಮಾಂಸವನ್ನು ಶಸ್ತ್ರಹಚ್ಚದೇ ತಂದಿರುತ್ತೇನೆ, ಬೇಗನೆ ತಕ್ಕೊಳ್ಳಿರಿ" ಎಂದು ಒದರಿದನು. ಆದರೆ ಒಂದಾದರೂ ಸಮೀಪಕ್ಕೆ ಬರದೆ ಒಮ್ಮಿಂದೊಮ್ಮೆ ಎಲ್ಲವೂ ಅಡಗಿದವು. ಈ ಪ್ರಕಾರವನ್ನು ಕಂಡು ಮಾಧವನು ಬೆರಗಾಗಿ ತನ್ನ ಅಭಿಲಾಷೆಯು ಕೈಗೂಡದೆಂದು ನಿರಾಶೆಯಿಂದಲೂ ಚಿಂತೆಯಿಂದಲೂ ಓಡಾಡುತ್ತಿರಲು, ದೂರದಿಂದಾರೋ ಅಳುವಂತೆ ಧ್ವನಿಯು ಅವನಿಗೆ ಕೇಳಬಂತು. ಮಾಧವನು ಕಿವಿಗೊಟ್ಟು ಕೇಳಲು ಅವನಿಗೆ ಪೂರ್ವದಲ್ಲಿ ಪರಿಚಿತವಾದ ಕರುಣಾಸ್ವರವು ಕಿವಿಯಲ್ಲಿ ಬಿದ್ದಂತೆ ಭಾಸವಾಗಿ ಮೈಯೆಲ್ಲ ನಡುಗು ಹುಟ್ಟಿತು; ಮುಂದೆ ಹೆಜ್ಜೆಯೇ ಸಾಗದಂತಾಗಿ, ಇದು ಏನಿರಬಹುದು! ಏನು ಅನಿಷ್ಟ ಬಂದಿರುವದೋ! ಎಂದು ಅಂಜಿದನು. ತುಸುಮುಂದಕ್ಕೆಹೋಗಿ ಸದ್ದುಮಾಡದೆ ಮತ್ತೆ ಕಿವಿಗೊಟ್ಟು ಕೇಳಲು—"ಅಯ್ಯೋ! ದುಷ್ಟತಾತನೇ, ಅರಸರನ್ನು ಮೆಚ್ಚಿಸುವದಕ್ಕಾಗಿ ನನ್ನನ್ನು ನಂದನನಿಗೊಪ್ಪಿಸಬೇಕೆಂದು ಮಾಡಿದ್ದಿಯಲ್ಲ! ಆದರೆ ಈಗ ಆರನ್ನೊಪ್ಪಿಸುವೆ? ನಾನಂತೂ ಈ ಲೋಕವನ್ನು ಬಿಟ್ಟು ತೆರಳಿದೆನು. ಹಾ! ತಾಯೀ, ದುರುಳ ದೈವವು ನಿನ್ನ ಮೋಹದ ಮಗಳನ್ನು ಅಗಲಿಸಿ ಬಿಟ್ಟಿತಲ್ಲ! ಅಮ್ಮಾ! ಕಾಮಂದಕೀ, ನನ್ನ ಮೇಲೆ ಜೀವ ಇಟ್ಟು ನನ್ನ ಸಲುವಾಗಿ ಕಷ್ಟಪಟ್ಟು ಪರಮಾರ್ಥವನ್ನು ಸಹ ತೊರೆದುದಕ್ಕೆ ಒಳ್ಳೇ ಫಲ ದೊರೆಯಿತು! ಪ್ರಾಣಸಖಿಯಾದ ಲವಂಗಿಕೇ, ನನ್ನ ದರುಶನವು ನಿನಗೆ ಇನ್ನು ಕನಸಿನಲ್ಲಿಯೇ ಸರಿ!"—ಎಂದು ಮಸಣಗಟ್ಟೆಯಲ್ಲಿರುವ ಚಂಡಿಕೇಶ್ವರಿಯ ಗುಡಿಯಿಂದ ಸ್ಪಷ್ಟವಾಗಿ ರೋದನ ಶಬ್ದಗಳು ಕೇಳಬಂದವು. ಮಾಧವನಿಗೆ ಈ ಧ್ವನಿಯು ಮದಿರಾಕ್ಷಿಯಾದ ಮಾಲತಿಯದೇ ಎಂದು ಪೂರಾ ಗುರ್ತುಹತ್ತಿದುದರಿಂದ ಹೇಗಾದರೂ ಮಾಡಿ ತನ್ನ ಪ್ರಿಯಳಾದ ಮಾಲತಿಯನ್ನು ಜೀವದಿಂದ ಬದುಕಿಸಬೇಕೆಂದು ಆತುರದಿಂದ ಚಂಡಿಕೇಶ್ವರಿಯ ದೇಗುಲದೆಡೆಗೆ ತ್ವರೆ ಮಾಡಿದನು. ದೇಗುಲವನ್ನು ಸಮೀಪಿಸುವಷ್ಟರಲ್ಲಿ ಗುಡಿಯ ಗರ್ಭವಿವರದಿಂದ ಪ್ರತಿಧ್ವನಿತವಾಗಿ ಮತ್ತೂ ಭೀಷಣವಾಗಿ ತೋರುವಂತೆ ಗಂಭೀರ ಮತ್ತು ತಾಲಸ್ವರದಿಂದ ದೇವಿಯ ಸ್ತೋತ್ರದ ಪಠಣವು ನಡೆದಿತ್ತು. ಅದೇನೆಂದರೆ:—

॥ दण्डकवृत्त ॥

प्रचलि । तकार । क्रांतप । यन्तच । ञ्चन्नख। । घाताभि । न्नंदुनि । स्यंदमा । नामृत । श्चयोतजा । वत्कपा । लावली । मुक्तच । ण्डाट्टहा । सत्रस । द्भूरिभू । तनत्रृ । तस्थुति ॥ १ ॥

श्वसद । सितभु । जंगभो । गांगद । ग्रंथिनि । प्पीडन । स्फारफु । लत्फणा । पाठनि । येद्विष । ज्योतिरु । ज्जृंभणो । डुामर । व्यस्तवि । स्तारिदः । खण्डप । र्यासित । क्ष्माधरं ॥ २ ॥

ज्वलद । नलपि । शङ्कन । त्रच्छटा । च्छन्नभी । मोत्तमा । ज्ञभ्रमि । प्रस्तुता ॥ लातच । क्रक्रिया । स्यूतदि । ग्भागमु । त्तुङ्गखा टाङ्कवो । टिध्वजो । द्भूतिवि । क्षिप्तता । रागणं ॥ ३ ॥

प्रमुदि । तकट । पूतनो । त्तालवं । तालता । लस्फुट । त्कर्णसं । भ्रांतगौ । रीघना । श्लेषहृ । प्यन्मनें । स्त्र्यम्बका । नंदिव । स्तांडवं । देविभू । यादभी । ष्टयैचहृ । ष्टयैचनः ॥ ४ ॥

ಇದನ್ನು ಕೇಳಿ ಗಾಬರಿಯಿಂದ ಮಾಧವನು ಗಡಿಬಿಡಿ ಎಡವುತ್ತ ಗುಡಿಯು ಬಾಕಿಲಕ್ಕೆ ತಲಪಿ ಹೊಸ್ತಲದಾಟುವಷ್ಟರಲ್ಲಿ, ಉಗ್ರಸ್ವರೂಪದ ಈರ್ವ ಚಾಂಡಾಲರ ಮಧ್ಯದಲ್ಲಿ, ತೋಳಗಳ ನಡುವೆ ಸಿಕ್ಕು ಒದ್ದಾಡುವ ಹುಲ್ಲೆಯ ಮರಿಯಂತೆ, ರಕ್ತವರ್ಣದ ಮಾಲ್ಯವಸ್ತ್ರಗಳನ್ನು ಹಾಕಿಕೊಂಡು ತೀವ್ರವೇ ಬಲಿಯಾಗಿ ಮೃತ್ಯುವಿನ ಮುಖದಲ್ಲಿ ಬೀಳಲಿಕ್ಕೆ ಸಿದ್ಧಮಾಡಿದ ವಧ್ಯಚಿಹ್ನಗಳಿಂದ ನಿಂತಿದ್ದ ಭೂರಿವಸುವಿನ ಮಗಳಾದ ಮಾಲತಿಯನ್ನು ಕಂಡನು. ಆ ಚಾಂಡಾಲರ ವೇಷವಾದರೂ ಕಡು ಭಯಂಕರವಾಗಿತ್ತು. ಕೊರಳಲ್ಲಿ ತಲೆಬುರುಡೆಗಳ ಮಾಲೆಯನ್ನು ಹಾಕಿಕೊಂಡಿದ್ದರು. ಟೊಂಕಕ್ಕೆ ಕಿರುಗೆಜ್ಜೆಗಳ ಉಡುದಾರ ಕಟ್ಟಿದ್ದರು. ತಲೆತುಂಬ ಉದ್ದವಾದ ಜಟೆಯನ್ನು ಬೆಳಿಸಿ ಗಂಟುಕಟ್ಟಿ ದುದರಿಂದ ತಲೆಯಮೇಲೆ ಭಾರವಾದ ಹೊರೆಯನ್ನಿಟ್ಟುಕೊಂಡಂತೆ ತೋರುತ್ತಿತ್ತು. ನಡುಕಟ್ಟಿಗೆ ಬುಡುಬುಡುಕೆಯೆಂಬ ವಾದ್ಯವನ್ನೂ ಗಂಟೆಗಳನ್ನೂ ಜೋತುಬಿಟ್ಟಿದ್ದರು. ಎಡಬಲದ ಭುಜಗಳಮೇಲೆ ನಾನಾವರ್ಣದ ಅರವಿಯ ನಿಶಾನಿಗಳು ಹಾರಾಡುತ್ತಿದ್ದವು. ಹಣೆಯಮೇಲಿನ ವಟ್ಟವಾದ ಕುಂಕುಮದ ಪಟ್ಟು ಎದ್ದು ಕಾಣಿಸುತ್ತಿತ್ತು. ಇವರೀರ್ವರು ದೇವಿಯ ಸ್ತೋತ್ರವನ್ನು ಉಚ್ಚಸ್ವರದಲ್ಲಿ ಅನ್ನವಾಗ ಕುಣಿಯುತ್ತಿರುವದರಿಂದ ತಲೆಬುರುಡೆಗಳೂ ಗೆಜ್ಜೆಗಳೂ ಗಂಟೆಗಳೂ ಒಂದಕ್ಕೊಂದು ತಾಕಲಾಡಿ ಅದರಿಂದ ಹುಟ್ಟಿದ್ದ ಗಣಗಣಧ್ವನಿಯು ಭೀತಿಯನ್ನುಂಟುಮಾಡುತ್ತಿತ್ತು. ಇವರಲ್ಲೊಬ್ಬನು ಪುರುಷನಿದ್ದನು. ಇವನ ಹೆಸರು ಅಘೋರಘಂಟ. ಮತ್ತೊಬ್ಬಳು ಅಘೋರಘಂಟನ ಶಿಷ್ಯಳಾದ ಕಪಾಲಕುಂಡಲೆಯೆಂಬ ಹೆಸರಿನ ಸ್ತ್ರೀಯಿದ್ದಳು.

ಈ ಚಾಂಡಾಲರಾರು? ಮಾಲತಿಯು ಇವರ ಕೈಯಲ್ಲಿ ಹೇಗೆ ಸಿಕ್ಕಳು? ಎಂಬದನ್ನು ತುಸು ಹೇಳತಕ್ಕದ್ದದೆ. ಇವರು ಶಿವಶಕ್ತಿಯ ಉಪಾಸಕರಾದ ಕಾಪಾಲಿಕರು; ಅಂದರೆ ಕಾಡಸಿದ್ಧರು. ಈ ಕಾಪಾಲಿಕರು ಆ ಕಾಲದಲ್ಲಿ ಬಹುಜನರಿದ್ದಂತೆ ತೋರುತ್ತದೆ.

ಇವರು ಯೋಗಸಾಧನೆಯಿಂದ, ಇಡಾಪಿಂಗಲಾ ಮುಂತಾದ ಷೋಡಶನಾಡೀಚಕ್ರದ ಮಧ್ಯದಲ್ಲಿ ವಾಸಮಾಡಿರುವ ಪರಮಾತ್ಮನಲ್ಲಿ ತಮ್ಮ ಜೀವಾತ್ಮವನ್ನೈಕ್ಯಮಾಡಿ ಸಮಾಧಿ ಲಯ ಮುಂತಾದ ಕ್ರಿಯೆಗಳಿಂದ ಇಷ್ಟಸಿದಿಯನ್ನು ಹೊಂದುತ್ತಿದ್ದರೆಂದು ಕಂಡುಬರುತ್ತದೆ. ಷೋಡಶನಾಡಿಗಳಲ್ಲಿ ವಾಯುಸ್ತಂಭನವನ್ನು ಮಾಡುವದರಿಂದಲೂ ಶರೀರದಲ್ಲಿಯ ಪಂಚಮಹಾಭೂತಗಳ ಆಕರ್ಷಣದಿಂದಲೂ ಗಗನಮಾರ್ಗದಲ್ಲಿ ಸಹ ಆಯಾಸವಿಲ್ಲದೆ ಉಡ್ಡಾಣ ಮಾಡುವ ಶಕ್ತಿಯನ್ನು ಇವರು ಸಂಪಾದಿಸುತ್ತಿದ್ದರೆಂದು ಗೊತ್ತಾಗುತ್ತದೆ. ಸಂಪೂರ್ಣ ಮಂತ್ರಸಿದ್ಧಿಯನ್ನು ಪಡೆಯಬೇಕಾದರೆ ಅನೇಕ ಕೃತಿಗಳನ್ನು ಹೇಳಿರುವದುಂಟು. ಅವುಗಳಲ್ಲಿ ಶಿವಶಕ್ತಿಗೆ ನರಬಲಿಯನ್ನು ಕೊಡುವದೊಂದಾಗಿರುವದೆಂದು ಈ ಕಾಪಾಲಿಕರು ನಂಬುತ್ತಿದ್ದರು. ಅಘೋರಘಂಟನು ಈ ಪಂಥದ ಕಾಡಸಿದ್ದನಾದುದರಿಂದ ಮಂತ್ರಸಾಧನೆಯನ್ನು ಮಾಡಬೇಕೆಂದು ಹಲವುದಿವಸಗಳಿಂದ ಹವಣಿಸುತ್ತಿದ್ದನು. ಆದರೆ ಬಹುದಿನ ಬಲಿಯು ಎಲ್ಲಿಯೂ ದೊರೆತಿದ್ದಿಲ್ಲ. ಕಡೆಗೆ ಒಂದಾನೊಂದುದಿನ ಮಾಲತಿಯು ತನ್ನ ಉಪ್ಪರಿಗೆಯ ಮೇಲೆ ಮಲಗಿರುವದನ್ನು ತಿಳಿದು, ಒಳ್ಳೇ ಬಲಿಯು ಸಿಕ್ಕಿತೆಂದೆಣಿಸಿ ಪೂಜೆಯ ಸಾಮುಗ್ರಿಗಳನ್ನು ಸಿದ್ಧಪಡಿಸಲಿಕ್ಕೆ ತನ್ನ ಶಿಷ್ಯಳಾದ ಕಪಾಲಕುಂಡಲೆಯನ್ನು ಮುಂದೆ ಕಳುಹಿಸಿ, ತಾನು ಮೆಲ್ಲನೆ ಮಾಲತಿಯನ್ನೆತ್ತಿಕೊಂಡು ಅಘೋರಘಂಟನು ಆಕಾಶಮಾರ್ಗವಾಗಿ ಸ್ಮಶಾನದಲ್ಲಿರುವ ಚಂಡಿಕೇಶ್ವರಿಯ ಗುಡಿಗೆ ಇಳಿದುಬಂದು ಅವಳನ್ನು ಬಲಿಕೊಡುವ ಕೆಲಸಕ್ಕೆ ಹತ್ತಿದ್ದನು. ಈ ಸಮಯದಲ್ಲಿ ಮಾಧವನೂ ದೈವಸಂಕಲ್ಪದಿಂದ ಅಲ್ಲಿಯೇ ಬಂದಿದ್ದನು.

ಇವರೀರ್ವರನ್ನು ನೋಡಿ ಮಾಧವನು ಗಾಬರಿಯಿಂದಲೂ, ಅಂಜಿಕೆಯಿಂದಲೂ ಹಾ! ಕ್ರೂರ ದೈವವೇ, ಇದೇನು ಅನಿಷ್ಟವನ್ನು ತಂದಿ? ಎಂದು ಚೀರಿದನು. ಇಷ್ಟರಲ್ಲಿ ಕಪಾಲಕುಂಡಲೆಯೆಂಬ ಹೆಸರಿನವಳು ಮಾಲತಿಯನ್ನು ಕುರಿತು––ತಂಗೀ, ನಿನ್ನ ಮರಣವು ಒದಗಿ ಬಂದಿರುವದು. ಇನ್ನು ತಡವೇಕೆ! ನಿನ್ನ ಪ್ರಿಯನ ಸ್ಮರಣೆಯನ್ನು ಮಾಡು; ಎಂದು ಅಂದಳು. ಮಾಲತಿಯು ಭೀತಿಯಿಂದ ಗದಗದ ನಡಗುತ್ತ ಬಿಕ್ಕಿಬಿಕ್ಕಿ-ಪ್ರಿಯವಲ್ಲಭನಾದ ಮಾಧವನೇ, ನಾನು ಪರಲೋಕಕ್ಕೆ ಹೋದ ಮೇಲೆ ನನ್ನನ್ನು ಮರೆಯಬೇಡ ಕಂಡೆಯಾ? ಪ್ರೀತಿಯುವರು ನೆನಿಸಿಕೊಂಡರೆ ಸತ್ತವರು ಇದ್ದಂತೆಯೇ ತಿಳಿಯುತಕ್ಕದ್ದು ಎಂದು ಕರಳುಕರಗುವಂತೆ ಅಳಹತ್ತಿದಳು. ಆದರೆ ಆ ಪಾಪಾತ್ಮರಾದ ಚಾಂಡಾಲರಿಗೆ ಕನಿಕರವೆಲ್ಲಿ! ಸ್ವಾರ್ಥಸಾಧಕರು ಎಂಥ ನಿಂದ್ಯ ಕೆಲಸವನ್ನಾದರೂ ಮಾಡಲಿಕ್ಕೆ ಹೇಸುವವರಲ್ಲ. ಕೂಡಲೆ ಅಘೋರಘಂಟನೆಂಬವನು ತನ್ನ ಕಠಿಣವಾದ ಖಡ್ಗವನ್ನು ಮೇಲಕ್ಕೆತ್ತಿ––"ದೇವೀ ಚಾಮುಂಡೀ, ಮಂತ್ರಸಾಧನೆಯ ಮೊದಲು ನಿನಗೊಂದು ಬಲಿಯನ್ನೊಪ್ಪಿಸುವೆನೆಂದು ನನ್ನ ಹರಿಕೆಯಿತ್ತು; ಅದು ಈಗ ಕೈಗೂಡಿರುತ್ತದೆ. ಸ್ವೀಕರಿಸಿ ಉದ್ಧಾರಮಾಡು–" ಎಂದು ಪ್ರಾರ್ಥನೆಯ ಮಾಡತೊಡಗಿದನು. ಮುಂದೆ ಅಘೋರ

ಘಂಟನು ತನ್ನ ಪ್ರಾರ್ಥನೆಯನ್ನೆಲ್ಲ ತೀರಿಸಿ ಖಡ್ಗವನ್ನು ಮಾಲತಿಯ ಕುತ್ತಿಗೆಯ ಮೇಲೆ ಹಾಕುವವನೇ! ಆದರೆ ದೈವಯೋಗದಿಂದ ಮಾಧವನು ಒಳ್ಳೆಯ ಪ್ರಸಂಗವನ್ನು ಸಾಧಿಸಿ ದಿಟ್ಟತನದಿಂದ ಮುಂದುವರಿದು ಮಾಲತಿಯನ್ನು ತನ್ನೆಡೆಗೆ ಸೆಳಕೊಂಡು—ಎಲೈ! ದುರುಳ ಪಾಪಿಯೇ, ಅತ್ತನಡೆ; ಇಲ್ಲವಾದರೆ ಜೀವಕ್ಕೆರವಾಗುವೆ. ಎಂದು ಕಿಡಿಗಣ್ಣಿನ ಕೋಪ ದಿಂದ ಹಲ್ಲುಕಡಿದು ಅಘೋರಘಂಟನನ್ನು ಗದರಿಸಿದನು. ಅಘೋರಘಂಟನು ಮಾಧ ವನ ಧೈರ್ಯಕ್ಕೆ ಬೆರಗಾಗಿ ಕಾಲು ಹಿಂದೆಗೆದು ಒಂದು ಮೂಲೆಗೆ ಸರಿದನು. ಮಾಲ ತಿಗೆ ತುಸು ವಿಶ್ವಾಸಹುಟ್ಟಿ—ಮಹಾರಾಯನೇ ನನ್ನನ್ನು ಕಾಪಾಡು! ಕಾಪಾಡು! ಎಂದು ಮಾಧವನನ್ನು ಬಿಗಿದಪ್ಪಿದಳು. ಮಾಧವನು ಅವಳ ಕಣ್ಣುಗಳನ್ನು ತನ್ನ ಸೆರಗಿನಿಂದೊ ರಸಿ, ಪ್ರಿಯೇ ನಡುಗಬೇಡ, ನಡುಗಬೇಡ. ನಾನು ಇಕೋ ನಿನ್ನ ಬಳಿಯಲ್ಲಿಯೇ ಇರು ವೆನು. ಈ ದುಷ್ಟನಾದ ಪಾಪಿಯನ್ನು ನಿನ್ನ ಕಣ್ಣುಮುಂದೇ ಒಳಿತಾಗಿ ದಂಡಿಸುವೆನು; ಹೆದರಿಕೆಯನ್ನು ಬಿಡು. ಆದರೆ ಇವರ ಕೈಯಲ್ಲಿ ನೀನು ಹೇಗೆಸಿಕ್ಕಿ? ಎಂದು ಸಂತವಿಸಿ ಕೇಳಲು ಕೆಲವೊತ್ತಿನಮೇಲೆ ಮಾಲತಿಯು ಧೈರ್ಯತಾಳಿ ಮಹಾರಾಯರೇ, ನಾನು ನಮ್ಮ ಮೇಲುಪ್ಪರಿಗೆಯ ಮೇಲೆ ಮಲಗಿದ್ದು ಎಚ್ಚರಾಗಿ ಕಣ್ಣು ತೆರೆದು ನೋಡಲು ಈ ದುರಾತ್ಮನ ಕೈಯಲ್ಲಿ ಸಿಕ್ಕಿದುದನ್ನಷ್ಟೇ ಕಂಡೆನಲ್ಲದೆ ಹೆಚ್ಚಿನದನ್ನು ನಾನರಿಯೆನು. ಆದರೆ ತಾವು ಇಲ್ಲಿ ಬಂದ ಬಗೆಯೇನು?—ಎಂದು ಕೇಳಲು ಮಾಧವನು ತಾನು ಮಾಲತಿ ಯೋಸುಗ ನಿರಾಶೆಪಟ್ಟು ನರಮಾಂಸವಿಕ್ರಯಕ್ಕೆ ರುದ್ರಭೂಮಿಯಲ್ಲಿ ತಿರುಗಾಡುವಾಗ ರೋದನಸ್ವರವು ಕೇಳಬಂದ ಕತನವನ್ನೆಲ್ಲ ಅವಳಿಗೆ ಹೇಳಿದನು.

ಹೀಗೆ ಕಾಕತಾಲೀಯನ್ಯಾಯದಿಂದ ಅಕಸ್ಮಾತ್ತಾಗಿ ಒದಗಿ, ರಾಹುವಿನಿಂದ ಗ್ರಾಸಿ ಸಲ್ಪಡುವ ಪೂರ್ಣಚಂದ್ರನಂತಿರುವ ತನ್ನ ವಲ್ಲಭೆಯನ್ನು ಆ ಚಾಂಡಲನ ಖಡ್ಗಪಾತ ದಿಂದ ಉಳಹಿದುದಕ್ಕೆ ಮಾಧವನ ಚಿತ್ತವು ನಾನಾಬಗೆಯ ವಿಕಾರಗಳಿಂದ ಬೆರೆತು ಚಂಚಲ ವಾಯಿತು; ಒಂದುಕಡೆ ಮಾಲತಿಯನ್ನು ಬದುಕಿಸಿದ ಉಲ್ಲಾಸದಿಂದಲೂ ಅವಳ ವಿಷಯ ಕವಾದ ಕರುಣೆಯಿಂದಲೂ, ಮತ್ತೊಂದುಕಡೆ ಮಾಲತಿಯು ಆ ದುರುಳರ ಕೈಯಲ್ಲಿ ಸಿಕ್ಕ ಬಗ್ಗೆ ವಿಸ್ಮಯದಿಂದಲೂ ಕ್ರೋಧದಿಂದಲೂ ಇನ್ನೂ ಪರಿಪರಿಯ ವಿಚಾರತರಂಗಗಳಿಂದ ಮಾಧವನ ಅಂತಃಕರಣವು ಹೊಯ್ದಾಡುತ್ತಿರಲು ಅಘೋರಘಂಟನು ಬಿರಿಗಣ್ಣಿನ ಸಿಟ್ಟಿ ನಿಂದ ಮುಂದೆ ಬಂದು—ಎಲೈ ಹಾರುವಪಸುಳೇ, ಹುಲಿಯ ದವಡೆಯಲ್ಲಿ ಸಿಕ್ಕಿದ ಜಿಂಕೆ ಯನ್ನು ಗಂಡೆರಳೆಯು ಬಿಡಿಸಹೋದರೆ ಬದುಕಬಹುದೇ? ನಿನ್ನಂಥ ಎಷ್ಟೋ ಪ್ರಾಣಿಗಳ ಕೊಲೆಮಾಡಿ ದೇವಿಯ ಚರಣಕ್ಕೆ ಅರ್ಪಿಸುವ ಕೆಲಸದಲ್ಲಿ ಮೈಯುಂಡಿರುವೆನು. ನಿನಗೆ ನಾನು ಹೆದರುವೆನೇ? ಈಗಲೇ ನಿನ್ನ ರುಂಡವನ್ನು ಖಡ್ಗದಿಂದ ಇಳಿಸಿ ನಿನ್ನ ರಕ್ತದಿಂದ ಮೊದಲು ಚಂಡಿಕೇಶ್ವರಿಗೆ ಅಭಿಷೇಕಮಾಡುವೆನು. ಎನಲು ಕಪಾಲಕುಂಡಲೆಯಾದರೂ ತನ್ನ ಗುರುವಿಗೆ ಹುರುಡಿಸಿದಳು. ಮಾಧವನು ಇನ್ನೂ ಚಿಕ್ಕವನಾಗಿದ್ದರೂ ಒಳ್ಳೇ

ಎದೆಗಾರನಿದ್ದನು. ಅಘೋರಘಂಟನ ಬಿರಗಣ್ಣಿನ ನೋಟಕ್ಕೂ ಅವನ ಕೊಬ್ಬಿನ ಮಾತಿಗೂ ಹೆದರದೆ,ಎಲೈ ದುರಾತ್ಮನಾದ ಪಾಖಂಡಚಾಂಡಾಲನೇ, ಇಂಥ ಭುವನ ಸುಂದರಿಯಾದ ಕುಲಕನ್ನಿಕೆಯನ್ನು ಕೊಲ್ಲಲಿಕ್ಕೆ ನಿನ್ನ ಕೈಯಾದರೂ ಹೇಗೆ ಎದ್ದಿತು? ವಿನೋದ ಚೇಷ್ಟೆಯಲ್ಲಿ ಸಹ ಶಿರೀಷ ಕುಸುಮದ ಪೆಟ್ಟು ತಗಲಿದರೆ ಬಾಡುವಂಥ ಕೋಮಲ ಶರೀರದಮೇಲೆ ಕಠಿಣವಾದ ಶಸ್ತ್ರಪ್ರಹಾರವನ್ನು ಮಾಡಲಿಕ್ಕೆ ನಾಚಿಕೆಯಾದರೂ ಹೇಗೆ ಹುಟ್ಟಲಿಲ್ಲ? ಎಲೈ! ಕೈಸಾಗದ ಹೇಡಿಯೇ, ಈ ಸಂಸಾರವನ್ನೇ ನಿಃಸಾರ ಮಾಡತ್ತಿದ್ದೆಯಲ್ಲ! ಈ ಕೊಲೆಯು ಸುದ್ದಿಯನ್ನು ಕೇಳಿ ಬಂಧುಬಳಗದವರ ಗತಿಯೇನಾಗುತ್ತಿತ್ತೋ? ಜನರ ಕಣ್ಣುಗಳಿರುವಿಕೆಯೇ ನಿರರ್ಥಕವಾಗಿ ಜಗತ್ತೆಲ್ಲ ಕಾಡಿನಂತೆ ಭಣಭಣನಾಗುತ್ತಿತ್ತು! ಎಲೇ ಪಾಪೀ, ತಾಳು; ನಿನ್ನ ದುಃಳತನದ ಫಲವನ್ನು ಈಗಲೇ ಉಣ್ಣುವೆ. ಮದ್ದಾನೆಯ ಗಂಡಸ್ಥಳವನ್ನು ಸೀಳುವ ಸಿಂಗನಮರಿಯು ಚಿಗರೆಯಕೂಡ ಕಾದಾಡಿ ಹಿಮ್ಮೆಟ್ಟಿದುದನ್ನು ಎಂದಾದರೂ ಕೇಳಬಲ್ಲಿಯಾ?-ಎಂದು ಶೌರ್ಯದಿಂದ ಕತ್ತಿಯನ್ನು ಒರೆಯಿಂದ ಹಿರಿಯಲು ಮಾಲತಿಯು ಧೈರ್ಯಸಾಲದೆ-ನಾಥನೇ, ತಾಳು ತಾಳು; ಅನರ್ಥವಾದೀತು. ಈ ದುಷ್ಟನು ಅಸಕೊಳ್ಳಲಿಕ್ಕಿಲ್ಲೆಂದು ಕಾಣುತ್ತದೆ. ಎಂದು ಜಗ್ಗಾಡಹತ್ತಿದಳು!

ಇಷ್ಟರಲ್ಲಿ ಮಾಲತಿಯನ್ನು ಹುಡುಕುವದಕ್ಕೆ ಬಂದ ಜನರ ಗಲಿಬಿಲಿಯು ಹೊರಗೆ ಕೇಳಬಂತು. ಮಾಲತಿಯು ಇಲ್ಲದಾದ ಸುದ್ದಿಯು ಪಟ್ಟಣದಲ್ಲಿ ಹಬ್ಬಿ ಎಲ್ಲಕಡೆಯಲ್ಲಿ ಗಡಿಬಿಡಿಯು ಹುಟ್ಟಿತ್ತು. ಭೂರಿವಸುವಿನ ಮನೆಯಲ್ಲಿ ಗೋಳಿದ್ದು, ಮಾಲತಿಯನ್ನು ಹುಡುಕುವದಕ್ಕೆ ರಾವುತರು ನಾಲ್ಕೂಕಡಿಗೆ ಕಳುಹಲ್ಪಟ್ಟಿದ್ದರು. ಎಲ್ಲಿ ಹುಡುಕಿದರೂ ಮಾಲತಿಯು ಕುರುಪೇ ಸಿಗಲಿಲ್ಲ ಈ ಸುದ್ದಿಯು ಕಾಮಂದಕಿಗೆ ಹತ್ತಲು, ಅವಳು ಅವಸರದಿಂದ ಭೂರಿವಸುವಿನ ಮನೆಗೆ ಹೋಗಿ ಅಮಾತ್ಯರಿಗೆ ಸಮಾಧಾನ ಹೇಳತೊಡಗಿದಳು. ಆವರೆ ಆವದೂ ಬಗೆಹರಿಯಲೊಲ್ಲದು. ಕಡೆಗೆ ಜಾಣಳಾದ ಕಾಮಂದಕಿಯು ಮನದಲ್ಲಿ ದೇನಿಸಿ, ಚಂಡಿಕಾದೇವಿಗೆ ಬಲಿಯೊಡ್ಡಲಿಕ್ಕೆ ಅಘೋರಘಂಟನೇ ಇಂಥ ಅದ್ಭುತವನ್ನು ಮಾಡಿರಬಹುದೆಂದು ಸರಿಯಾಗಿ ಪಡಿಕಟ್ಟಿ, ಮಸಣದಲ್ಲಿರುವ ಚಂಡಿಕೆಯ ಗುಡಿಯನ್ನು ಮುತ್ತಲಿಕ್ಕೆ ಕೆಲವು ರಾವುತರನ್ನು ಕೊಟ್ಟು ಕಳುಹಿದಳು. ಈ ರಾವುತರು ಆಮೋರಿಗೆ ಬೇಗದಿಂದ ಕುದುರೆಗಳನ್ನೋಡಿಸಿ ಗುಡಿಯ ಬಾಕಿಲಕ್ಕೆ ತಲಪಿ ಸುತ್ತಲೂ ಮುತ್ತಿಗೆಯಹಾಕಿದ್ದರು. ಈ ಕೋಲಾಹಲವನ್ನು ಕೇಳಿ ಮಾಧವನಿಗೆ ತುಸು ಭರವಸ ಹುಟ್ಟಿತು. ಕಪಾಲಕುಂಡಲೆಯೂ ಅಘೋರಘಂಟನೂ ಗಾಬರಿಯಾಗಿ ನಿಂತುಕೊಂಡರು. ಮಾಧವನು ಮಾಲತಿಯನ್ನು ಬಳಗದವರ ವಶಕ್ಕೆ ಕೊಟ್ಟು ಕೆಲವೊತ್ತು ಅಘೋರಘಂಟನ ಕೂಡ ಕಲಿತನದಿಂದ ಹೋರಾಡಿ ಕಡೆಗೆ ಆ ಪಾಪಿಯನ್ನು ಕಠಾರಿಯಿಂದ ಇರಿದು ಕೆಡಹಿ ಚರ್ಮ ಮಾಂಸ ಎಲುವುಗಳನ್ನು ತುಂಡು ತುಂಡುಮಾಡಿ ಒಟ್ಟಿದನು. ಸ್ತ್ರೀಹತ್ಯಾಪಾಪಕ್ಕೆ

ಗುಣಿಯಾಗಬಾರದೆಂಬ ಅಭಿಪ್ರಾಯದಿಂದ ಕಪಾಲಕುಂಡಲೆಯನ್ನು ಮಾತ್ರ ಹಾಗೇ ಬಿಟ್ಟುಬಿಟ್ಟನು. ಕಪಾಲಕುಂಡಲೆಯು ತನ್ನ ಗುರುವಿನ ವಧಪ ಕುನಃಶಿನಿಂದ ಮನಸಿನಲ್ಲಿ ಕುದಿಯುತ್ತಲೇ, ಇವರ ಸೇಡನ್ನು ತೀರಿಸಿಕೊಳ್ಳದೆ ಇರಬಾರದೆಂದು ನಿಶ್ಚಯಿಸಿ ಆ ಸ್ಥಳದಿಂದ ಹೊರಟು ಹೋದಳು. ಆ ಮೇಲೆ ಎಲ್ಲರೂ ಮಾಧವನ ಶೌರ್ಯಕ್ಕೆ ತಲೆದೂಗಿ ಮಾಲತಿಯೊಡನೆ ಸಂಭ್ರಮದಿಂದ ಪುರವನ್ನು ಸೇರಿ ಆನಂದಸಮುದ್ರದಲ್ಲಿ ಲೋಲಾಡಿದರು. "ದೈವೀವಿಚಿತ್ರಾಗತೀ,,

(ಸ್ಮಶಾನವರ್ಣನೆಯೆಂಬ ೫ನೆಯ ಅಧ್ಯಾಯವು).

---

## ೬ನೇ ಅಧ್ಯಾಯ.

ಮಾಲತಿಯು ಮೃತ್ಯುವಿನ ಬಾಯಿಂದ ತಿರುಗಿಬಂದ ಸುದ್ದಿಯನ್ನು ಕೇಳಿ ಎಲ್ಲ ಪೌರಜನರಿಗೆ ಪರಮಾವಧಿಯ ಆಲ್ಹಾದವಾಯಿತು. "ಶುಭಸ್ಯ ಶೀಘ್ರಂ" ಎಂಬ ನ್ಯಾಯದಂತೆ ನಂದನಮಾಲತಿಯರ ವಿವಾಹಕಾರ್ಯವನ್ನು ತೀವ್ರವೇ ಜರುಗಿಸಿ ಉಲ್ಲಾಸಕ್ಕೆ ಉಲ್ಲಾಸ ಬೆರಿಸಿಬಿಡಬೇಕೆಂಬ ಉದ್ದೇಶದಿಂದ ಅರಸನು ಭೂರಿವಸುವಿಗೆ ಸೂಚನೆಯ ಮಾಡಿದನು. ದೊರೆಗಳಪ್ಪಣೆಯನ್ನು ಮೀರಬಹುದೇ? ಭೂರಿವಸುವಾದರೂ ರಾಜಾಜ್ಞೆಗೆ ತಲೆವಾಗಿ ಆ ಮೇರೆಗೆ ಆ ದಿವಸವೇ ಗೋರಜೋಮುಹೂರ್ತವನ್ನು ತೆಗಿಸಿ ಲಗ್ನದ ಸಾಹಿತ್ಯಸಾಮುಗ್ರಿಯನ್ನು ಏರ್ಪಡಿಸಲಪ್ಪಣೆಯನಿತ್ತನು. ಮದುವೆಯ ಸಿದ್ಧತೆಯು ಜಾಗ್ರತೆಯಿಂದ ನಡೆಯಿತು. ಹೇಳಿಕೇಳಿ ಅಮಾತ್ಯರ ಮನೆಯ ಮದುವೆಯು. ಏತಕ್ಕೇನು ಕೊರತೆಯು? ಪಟ್ಟಣದ ಕೇರಿಗಳಲ್ಲೆಲ್ಲ ಮಾದಳಿರಿನ ತೋರಣಗಳನ್ನೂ ಬಗೆಬಗೆಯ ಮಂಟಪಗಳನ್ನೂ ನಿಶಾನಿಗಳನ್ನೂ ತತ್‌ಕ್ಷಣವೇ ಕಟ್ಟಿದರು. ಅಮಾತ್ಯಮಂದಿರದೆದುರಿನ ಅಂಗಣದಲ್ಲಿ ವಿಶಾಲವಾದ ಹಂದರವನ್ನು ಹಾಕಿ ವಿವಿಧ ಚಿತ್ರಗಳಿಂದಲೂ ಅಲಂಕಾರಗಳಿಂದಲೂ ಸಿಂಗರಿಸಿದರು. ಎತ್ತರವಾದ ಜೋರುಜಗುಲಿಯನ್ನು ತರತರದ ಬಣ್ಣದಿಂದ ಅಂದಗೊಳಿಸಿ ಮಂಡಪದ ನಡುವೆ ಏರಿಸಿದರು. ದೊಡ್ಡವರ ಮನೆಯ ಮದುವೆಯಾದುದರಿಂದ ಕೌತುಕವನ್ನು ನೋಡುವದಕ್ಕಾಗಿ ಊರವರು ಕಡು ಸಂಭ್ರಮದಿಂದ ಅತ್ತಲಿಂದಿತ್ತ ಇತ್ತಲಿಂದತ್ತ ಸುಳಿದಾಡುತ್ತಿದ್ದರು. ಎಲ್ಲಿ ನೋಡಿದರೂ ನೆರೆದ ಜನರ ಗಡಿಬಿಡಿಯೇ ಕಾಣುತ್ತಿತ್ತು. ಲಗ್ನ ಮಂಡಪದಲ್ಲಿ ವೈದಿಕ ಬ್ರಾಹ್ಮಣರು ನೆರೆದು ಮಂತ್ರಘೋಷದಿಂದ ಕೀಸರಿಡಿಸಿದರು. ಮಂಗಳವಾದ್ಯಗಳ ಸಪ್ಪಳವು ಎಲ್ಲ ಕಡೆಯಲ್ಲಿಯೂ ಇಡಿಗಿತು. ಗೋಧೂಳೀ ಸಮಯಕ್ಕೆ ಮದುಮಗನಕೂಡ ಬೀಗರ ನಿಬ್ಬಣವು ಹೊರಡುವದಿತ್ತು. ಆದುದರಿಂದ ಮೊದಲು ಮದಲಗಿತ್ತಿಯನ್ನು ನಿರ್ವಿಘ್ನಸಿದ್ಧಿಯೋಸುಗ ದೇವತಾದರ್ಶನಕ್ಕೆ ಕಳುಹತಕ್ಕದ್ದೆಂದು ಕಾಮಂದಕಿಯು ನಿರೂಪಿಸಿದುದರಿಂದ ಭೂರಿವಸುವಿನ ಮಡದಿಯು ಆ ಮೇರೆಗೆ ಸನ್ನಾಹ ಮಾಡಲಿಕ್ಕೆ ಆಜ್ಞಾಪಿಸಿದಳು.

ಅವಳಪ್ಪಣೆಯನುಸಾರವಾಗಿ ಗ್ರಾಮದೇವತೆಯ ದರುಶನಕ್ಕೆ ಹೊರಡುವ ಮೆರವಣಿಗೆಯೆಲ್ಲ ಸಿದ್ಧವಾಗಿ ನಿಲ್ಲಲು, ಮಾಲತಿಯು ಕುತನಿಯ ಜೂಲಿನಿಂದಲೂ ಬೆಳ್ಳಿಯ ರುಳಿ ಮುಂತಾದ ಆಭರಣಗಳಿಂದಲೂ ಅಲಂಕರಿಸಿದ ಹೆಣ್ಣಾನೆಯನ್ನೇರಿ ಕಡುವೈಭವದೊಡನೆ ಅಂಬಾರಿಯಲ್ಲಿ ಕುಳಿತು ಗುಡಿಯನ್ನು ಕುರಿತು ತೆರಳಿದಳು. ಅಂತರಿಕ್ಷದಲ್ಲಿ ಹಾರಾಡುವ ರಾಜಹಂಸಗಳಂತೆ ಒಪ್ಪುವ ಚಿನ್ನದ ಕಾವಿನ ಬಿಳೀ ಚಾಮರಗಳು ಎಡಬಲದಲ್ಲಿ ಸೂಳ್ವರಿಯುತ್ತಿದ್ದವು. ಸುತ್ತಲೂ ಗಗನದಲ್ಲಿ ಸೂಸುಗಾಳಿಯಿಂದ ಅಲೆದಾಡುವ ಧ್ವಜ ಪತಾಕೆಗಳೂ ಮೇಲಕ್ಕೆತ್ತಿದ ಬಿಳೀ ಸೀಗುರಿಗಳೂ ಸರೋವರದಲ್ಲಿ ತಲೆದೋರಿ ತೆರೆಗಳ ತಾಗುದಟ್ಟಿನಿಂದ ಹೊಯ್ದಾಡುವ ಬಿಳಿದಾವರೆಗಳಂತೆ ಒಪ್ಪುತ್ತಿದ್ದವು. ಮುಂದುಗಡೆಯಲ್ಲಿ ಗಣಗಣಿಸುವ ಕಿರುಗಂಟೆಗಳ ಸರಗಳಿಂದ ಶೋಭಿಸುವ ಆನೆಗಳ ಮೇಲೆ ಕುಳಿತು ಬರುತಿರುವ ವಾರಾಂಗನೆಯರು ವೀಳ್ಯದಿಂದ ತುಂಬಿದ ಉಬ್ಬುಗಲ್ಲಗಳಿಂದ ಮಧುರವಾದ ಗಾನವನ್ನು ಮಾಡುತ್ತಿರುವದರಿಂದ ಸಂಗೀತಮಯವಾದ ಸಪ್ಪಳವು ಎಲ್ಲ ಕಡೆಯಲ್ಲಿ ತುಂಬಿಕೊಂಡಿತ್ತು. ಅವರು ಧರಿಸಿದ ವಿವಿಧವಾದ ನವರತ್ನದೊಡವೆಗಳ ನಾನಾವರ್ಣದ ಕಿರಣಗಳಿಂದ ಝಳಪಿಸುವ ಬೆಳಕುಸುತ್ತಲು ಹರಹಿದುದರಿಂದ ಮುಗಲಲ್ಲಿ ಹೊಳೆಯುವ ವಿಚಿತ್ರವಾದ ಕಾಮನ ಬಿಲ್ಲುಗಳೋ, ಗರಿಗೆದರಿ ಉಡ್ಡಾಣ ಮಾಡುವ ನವಿಲುಗಳೋ ಎಂಬಂತೆ ತೋರುತ್ತಿದ್ದವು. ಬಣ್ಣದ ತಡಿಗಳಮೇಲೆ ಡಂಕೆಯವರನ್ನು ಹೊತ್ತುಕೊಂಡು ಕುದುರೆಗಳು ಕೆಲವೆಡೆಯಲ್ಲಿ ಒಯ್ಯಾರದಿಂದ ಕುಣಿಯುತ್ತಿದ್ದವು. ಎಲ್ಲಕ್ಕೂ ಮುಂದೆ ಭೇರಿ-ಪಟಹ-ಮೃದಂಗ-ಸಾರಂಗಿ-ಡಕ್ಕೆ-ತುತೂರಿ-ಕೊಂಬು-ಕೊಳಲು-ಮುಂತಾದ ಮಂಗಳ ವಾದ್ಯಗಳ ಗದ್ದಲದಿಂದ ಕಿವಿಗಡಚಿಕ್ಕಿ ಏನೂ ಕೇಳದಂತೆ ಆಗಿತ್ತು. ಅಹಹ! ಅಮಾತ್ಯ ಭೂರಿವಸುವಿನ ಸಂಪತ್ತಿಗೆ ಎಣೆಯೇ ಇಲ್ಲೆಂದು ನೆರೆದ ಪ್ರೇಕ್ಷಕರು ಕೌತುಕದಿಂದ ತಲೆದೂಗುತ್ತಿದ್ದರು.

ಇಷ್ಟು ಸಂಭ್ರಮದಿಂದ ಈ ಮೆರವಣಿಗೆಯು ಸಾಗಿ ಗುಡಿಯ ಮಹಾದ್ವಾರಕ್ಕೆ ತಲಪಿದಕೂಡಲೆ ಕಾವಲದವರು ಬೆತ್ತದ ಸೆಳೆಗಳ ಬೆದರಣೆಯಿಂದ ಜನಸಮೂಹವನ್ನೋರೆ ಮಾಡಲು ಮಾವಟಿಗನು ಸಿಂದೂರದಿಂದ ಸಿಂಗರಿಸಿದ ಮಾಲತಿಯ ಆನೆಯನ್ನು ಅಂಕುಶದ ಸನ್ನೆಯಿಂದ ಕುಳ್ಳಿರಿಸಿದನು. ಮಾಲತಿಯು ಅಂಬಾರಿಯಿಂದ ಕೆಳಗಿಳಿದು ಪರಿವಾರದವರನ್ನೆಲ್ಲ ಹಿಂದುಳಿದು ಪೂರ್ವದ ಸಂಕೇತದಂತೆ ಕಾಮಂದಕೀಲವಂಗಿಕೆಯರೀರ್ವರನ್ನೇ ಮಾತ್ರ ಸಂಗಡ ಕರಕೊಂಡು ದೇವಾಲಯವನ್ನು ಸೇರಿದಳು. ಮಾಲತಿಯ ಒನಪೊಯ್ಯಾರವು ಮೋಹಕವಾಗಿದ್ದರೂ, ಪ್ರತಿಪದೆಯ ಚಂದ್ರನಂತೆ ತಿಳುವಾಗಿಯೂ ಬಿಳುಪಾಗಿಯೂ ಇರುವ ಅವಳ ಹೂಬಣ್ಣದ ಶರೀರವು ಒಂದುತರದ ಮನೋವ್ಯಥೆಯನ್ನು ತೋರ್ಪಡಿಸುತ್ತಿತ್ತು. ಮೈತುಂಬ ಬಗೆಬಗೆಯ ಚಿನ್ನರನ್ನದೊಡಿವೆಗಳನ್ನಿಟ್ಟುಕೊಂಡಿದ್ದರೂ, ಹೂಬಿಟ್ಟು ಒಣಗಿದ ಬಳ್ಳಿಯಂತೆ ಮಾಲತಿಯು ಗತಿಯಾಗಿತ್ತು. ದೇವತಾದರುಶನದ ನೆವದಿಂದ ಮಾತ್ರ ಇಲ್ಲಿ ಬಂದಿದ್ದಳಷ್ಟೇ; ಏನಾದರು ಉಪಾಯದಿಂದ ತನ್ನಿರುವಿಕೆ

ಯನ್ನಳಿಯಬೇಕಲ್ಲದೆ ಮರಳಿ ಮನೆಯಸೇರಿ ಆ ಅಂದಗೇಡಿಯಾದ ನಂದನನ ಪಾಲಾಗ ಬಾರದೆಂದು ಮನಸು ಗಟ್ಟಿಮಾಡಿಕೊಂಡೇ ಬಂದಿದ್ದಳು; ಈ ಬಯಕೆಯಾದರೂ ಮಾಲತಿಯ ಮುಖಮುದ್ರೆಯ ಮೇಲೆ ಹಣಿಕಿಹಾಕುವಂತೆ ತೋರುತ್ತಿತ್ತು. ಆದರೆ ದೈವಗೇಡಿಗಳಿಗೆ ಸಾವು ಕೂಡಬೇಕೆಂತ ಬಯಸಿದರೆ ಹೊತ್ತಿಗೆ ಒದಗುವದಿಲ್ಲ.

ಈ ಮೇರಿಗೆ ಕಾಮಂದಕೀಲವಂಗಿಕೆಯರೊಡನೆ ಮಹಾದ್ವಾರದ ಹೊಸ್ತಲವದಾಟಿ ಒಳಗೆ ಹೋಗುವಷ್ಟರಲ್ಲಿ ಭೂರಿವಸುವಿನ ಕಡೆಯಿಂದೋರ್ವ ದೂತನು ಬಂದು ಪೊಡಮಟ್ಟು ಆಭರಣದೊಂದು ಚಿಕ್ಕ ಕರಡಿಗೆಯನ್ನೂ ಜವಳಿಯ ಸಣ್ಣದೊಂದು ಸಂದುಕವನ್ನೂ ಕಾಮಂದಕಿಯ ಮುಂದಿರಿಸಿ—“ಅಮ್ಮಾ, ಈ ಒಡವೆಗಳನ್ನು ದೊರೆಗಳು ಕಳುಹಿಕೊಟ್ಟಿರುವರು. ಪೂಜೆಯ ಮೊದಲು ಮಾಲತಿಯಮ್ಮನವರನ್ನು ಇವುಗಳಿಂದ ಸಿಂಗರಿಸತಕ್ಕದ್ದೆಂದು ಅಮಾತ್ಯರ ಅಪ್ಪಣೆಯಾಗಿರುತ್ತದೆ”—ಎಂದು ವಿನಯದಿಂದರಿಕೆಮಾಡಿ ಸಂದುಕದ ಮುಚ್ಚಳವನ್ನು ತೆರೆದು ಜರದ ಕುಪ್ಪಸವನ್ನೂ, ಕೆಂಪು ಚುಕ್ಕೆಯ ಚಂದ್ರಗಾವೀ ಸೀರೆಯನ್ನೂ, ಭರಣಿಯೊಳಗಿನ ಮುತ್ತಿನ ಸರಗಳನ್ನೂ, ಚಂದ್ರಹಾರವನ್ನೂ, ರತ್ನ ಪದಕವನ್ನೂ ಇನ್ನೂ ಬೇರೆಬೇರೆ ಬಂಗಾರದ ಆಭರಣಗಳನ್ನೂ ಹೂಮಾಲೆಗಳನ್ನೂ, ಗಂಧ ಕೇಶರ ಕುಂಕುಮ ಮುಂತಾದ ಪೂಜೆಯ ಸಾಹಿತ್ಯಗಳನ್ನೂ ಪುನಗು ಜವಾಜಿ ಬುಕ್ಕಿಟ್ಟು ಊದಿನಕಡ್ಡಿ ಮೊದಲಾದ ಸುಗಂಧ ದ್ರವ್ಯಗಳನ್ನೂ, ಒಂದೊಂದು ತೆಗೆದು ತೋರಿಸಿ ಕಾಮಂದಕಿಗೊಪ್ಪಿಸಿ ಜೀಳ್ಕೊಂಡು ಹೊರಟು ಹೋದನು. ಬಳಿಕ ಕಾಮಂದಕಿಯು ಆ ಒಡವೆಗಳನ್ನು ಚನ್ನಾಗಿ ನೋಡಿಕೊಂಡು ಬರುವೆನೆಂದು ಹೇಳಿ, ಮಾಲತಿಯೊಡನೆ ಗರ್ಭಗುಡಿಯನ್ನು ಸೇರಿ ಪೂಜೆಯನ್ನುಪಕ್ರಮಿಸುವದಕ್ಕೆ ಲವಂಗಿಕೆಗೆ ಆಜ್ಞಾಪಿಸಿದಳು. ಆಮೇರೆಗೆ ಲವಂಗಿಕೆಯು ಒಳಗೆ ಹೋದಬಳಿಕ ಗಂಧಹೂವುಗಳನ್ನು ಮಾಲತಿಯ ಕೈಯಲ್ಲಿ ಕೊಟ್ಟು—“ಗೆಳತೀ, ಪಾಣಿಗ್ರಹಣದ ಪೂರ್ವದಲ್ಲಿ ಸೌಭಾಗ್ಯ ಸಂಪತ್ತಿಯ ಪ್ರಾಪ್ತಿಯೋಸುಗ ದೇವತೆಯ ಪೂಜೆಯನ್ನು ಮಾಲತಿಯ ಕೈಯಿಂದ ಮಾಡಿಸೆಂದು ಅಪ್ಪನವರು ಹೇಳಿರುತ್ತಾರೆ. ಆದುದರಿಂದ ಮೊದಲು ಪೂಜೆಯ ಮಾಡು”— ಎಂದುದಕ್ಕೆ ಮಾಲತಿಯು ಅಂಗಲಾಚಿ ಕಣ್ಣೀರುತಂದು—“ದೈವಗೇಡಿಯಾದ ನನ್ನ ಹೃದಯವು ಮೊದಲೇ ಬೆಂದುಹೋಗಿರುತ್ತದೆ; ಮತ್ತೆ ಇಂಥ ನಡುವ ಮಾತಿನಿಂದ ಚುಚ್ಚಿ ನೋಯಿಸುವೆಯೇ ತಕ್ಕೆ? ಆಗುವ ಮಾನಭಂಗವೆಲ್ಲ ಆಗಿ ಹೋದಂತಾಯಿತು. ಇನ್ನು ಸುಮ್ಮನೆ ಬಯಲಾಸೆಗೆ ಬಿದ್ದು ಜೀವ ಹಿಡಿದುಕೊಂಡು ಬದುಕುವದರಲ್ಲಿ ಮರ್ಯಾದೆಯುಂಟೆ? ಆದುದರಿಂದ ಪ್ರಾಣಸಖಿಯೇ, ನೀನು ಅನಾಥಳಾದ ನನ್ನ ಮೇಲೆ ಬೆನ್ನ ಹಿಂದೆ ಹುಟ್ಟಿದ ತಂಗಿಗಿಂತ ಹೆಚ್ಚು ಮಮತೆಯ ಮಾಡುತ್ತೀಯೆಂಬದು ನಿಜವಿದ್ದರೆ ಸೆರಗೊಡ್ಡಿ ಬೇಡಿಕೊಂಬುವ ನನ್ನದೊಂದು ಮಾತು ನಡಿಸಬೇಕು; ಅದು ಏನೆಂದರೆ ನಾನಳಿದು ಹೋದಮೇಲೆ ನನ್ನನ್ನು ನಿನ್ನ ಹೃದಯದಲ್ಲಿರಿಸಿಕೊಂಡು ಆ ಮಂಗಳಮೂರ್ತಿಯಾದ ಸರ್ವಾಂಗಸುಂದ

ರನ ಮುಖಾರವಿಂದವನ್ನು ಕಾಣತಕ್ಕದ್ದು; ಹಾಗೂ ನಾನಸುವಳಿದ ಸುದ್ದಿಯ ಕೇಳಿ ಸಂತಾಪದಿಂದ ತನ್ನ ಜೀವದಾಸೆದೊರೆದು ಶರೀರಕ್ಷಪಾಯವನ್ನೇನಾದರೂ ಮಾಡಿ ಕೊಳ್ಳದಂತೆ ಕಡು ಜೋಕೆಯಿಂದ ಆ ಮಹಾರಾಯನಾರಯಿಕೆಯ ಮಾಡತಕ್ಕದ್ದು ಕಂಡೆಯಾ? ನನಗೋಸುಗ ಇಷ್ಟು ಮಾತ್ರ ಮಾಡಿದೆಯೆಂದರೆ ನಾನು ಕೃತಾರ್ಥಳಾಗು ವೆನು —'' ಎಂದು ಲವಂಗಿಕೆಯನ್ನು ಬಿಗಿದಪ್ಪಿ ಗಳಗಳ ಅಳಹತ್ತಿದಳು. ಇದನ್ನು ಕಂಡು ಲವಂಗಿಕೆಯು:—" ಛೀ! ಮಂಗಲಕಾರ್ಯದಲ್ಲಿ ಇಂಥ ಮಾತು ಆಡುವರೆ? ನಿನ್ನ ಮಾತು ನಾನು ಕೇಳುವದಿಲ್ಲ ಹೋಗು." ಎಂದು ಮನಸಿಗೆ ಹತ್ತುವಂತೆ ಚುಚ್ಚಿ ನುಡಿಯಲು ಮಾಲತಿಯು ಕನಿಕರ ಬರುವಂತೆ ಲವಂಗಿಕೇ, ನನ್ನ ಜೀವಕ್ಕೆ ಹೆದರುವೆ ಯಷ್ಟೇ! ನನ್ನೆಣಿಕೆ ನಿನಗೆಳ್ಳಷ್ಟಾದರೂ ಇಲ್ಲ ನೋಡು.''—ಎನಲು ಕಾರ್ಯಸಾಧಕ ಳಾದ ಲವಂಗಿಕೆಯು—"ಹೀಗೇಕೆ ಮಾತಾಡುವೆ? ಮನಸಿನಲ್ಲಿದ್ದುದನ್ನಾದರೂ ಬಿಚ್ಚಿ ಹೇಳು." ಎಂದಳು.

ಮಾಲತೀ— " ಹೇಳುವದೇನು? ಈವರೆಗೆ ಅಳಿಯಾಸೆಗೊಳಗಾಗಿ ಜೀವ ಹಿಡಿದುಕೊಂಡಿದ್ದುದಕ್ಕೆ ಈ ಬಗೆಯಾಯಿತು. ಇನ್ನು ಮೇಲೆ ನನಗೆ ಹೆಚ್ಚಿನ ಬಯಕೆ ಗಳೇತಕ್ಕೆ? ಆ ಸುಟ್ಟ ಮುಸುಂಡಿಯ ಕೈಸೇರಿ ದುರಿತಕ್ಕೆ ಗುರಿಯಾದ ಕುಂದು ನನ ಗೆ ಬರುವದರೊಳಗಾಗಿಯೇ ಅಸುವ ನೀಗಿ ಧನ್ಯಳಾಗಬೇಕೆಂಬ ಮನೋರಥವೊಂ ದೇ ನನ್ನೆದೆಯಲ್ಲಿ ಕಟಿಯುತ್ತದೆ. ಆದುದರಿಂದ ನೀನು ನನಗೆ ನೆರವಾಗಿ ಈ ಕೆಲಸ ವನ್ನು ಸುಸೂತ್ರವಾಗಿ ಕೊನೆಗಾಣಿಸಿಕೊಡು''— ಹೀಗೆಂಬು ಲವಂಗಿಕೆಯ ಕಾಲು ಗಳಿಗೆರಗಿ ಕಂಬನಿಗಳನ್ನು ದುರಿಸಹತ್ತಿದಳು.

ಕಾಮಂದಕಿಯ ಕುಶಲತನದ ಪರೀಕ್ಷೆಯು ಈ ಪೊತ್ತು ಆಗುವದಿತ್ತು. ಇಷ್ಟು ದಿನ ಪರಿಪರಿಯಿಂದ ಕಷ್ಟಪಟ್ಟುದುದಕ್ಕೆ ಫಲವಾಗದೆ ಹೋದರೆ, ಮಾಲತೀ ಮಾಧವರೂ ಕಾಮಂದಕಿಯೂ ಬದುಕಿದ್ದು ಬರಿದಲ್ಲವೇ? ಮಾಲತಿಯನ್ನು ಮೊದಲು ಮದನೋ ದ್ಯಾನದಲ್ಲಿ ನೋಡಿದಂದಿನಿಂದ ಮೊಳೆತು ಬಳೆದಿದ್ದ ಮಾಧವನ ಕಾಮವಿಕಾರವೆಂಬ ಸಸಿ ಯು ಮಾಲತಿಯ ವಿವಿಧಪ್ರೇಮ ಚೇಷ್ಟೆಗಳೆಂಬ ಮೇಲಿಂವ ಮೇಲೆ ನೀರೆರೆದಂತಾಗಿ ಬಲಿ ತು ಈಗೀಗ ಹೂಬಿಡುವ ಹಸಿಯಲ್ಲಿತ್ತು. ಇಂಥ ಸಮಯದಲ್ಲಿ ಎಳೆ ಕುಡಿಯನ್ನು ಚಿವುಟಿ ಬಿಟ್ಟರೆ ಮುಂದೆ ಮಿಡಿಯಾಗುವ ಬಗೆಯಾವದು? ಸರ್ವಸ್ವೀಘಾತವಾಗುವದಿಲ್ಲವೇ! ಈ ಮಾತು ಕಾಮಂದಕಿಯ ಮನಸಿಗಾದರೂ ಚನ್ನಾಗಿ ಹೊಳೆದಿತ್ತು. ಆದುದರಿಂದಲೇ ಅವಳು ಮೈತುಂಬ ಕಣ್ಣುಳ್ಳವಳಂತೆ ಕಡು ಎಚ್ಚರಿಕೆಯಿಂದ ಕುಲದೇವತೆಗೆ ನಮಸ್ಕರಿಸಿ ಗುರು ಹಿರಿಯರನ್ನು ಸ್ಮರಿಸಿ ಒಳ್ಳೇ ಸಾಹಸಕ್ಕೆ ಕೈಹಾಕಿದ್ದಳು—ಏನೆಂದರೆ ಮಾಧವನನ್ನು ಮಕರಂದಕಲಹಂಸರ ಜತೆಮಾಡಿ ಗರ್ಭಗುಡಿಯ ಒಂದು ಮೂಲೆಯಲ್ಲಿ ಆರಿಗೂ ಕಾಣ ದಂತೆ ಅಡಗಿಸಿದ್ದಳು.

ಆ ಗೋಪ್ಯಸ್ಥಾನದಲ್ಲಿ ಮಾಧವನು ಮಾಲತೀಲವಂಗಿಕೆಯರ ಸಂಭಾಷಣವನ್ನೆಲ್ಲ ಕೇಳುತ್ತಿದ್ದನು. ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲ ಪ್ರೇಮಪೂರ್ವಕವಾಗಿ ಒಡೆದು ಹೇಳುವ ಮಾಲತಿಯ ಅಮೃತ ಸಮಾನವಾದ ನುಡಿಗಳು ಮಾಧವನ ಕಿವಿಯಲ್ಲಿ ಬಿದ್ದ ಕೂಡಲೆ ಅವನ ಬಾಡಿದ ಮೊಗವು ಅರಳಿತು. ಆದರೂ ಕನಿಕರ ಬರುವ ಅವಳ ನಿರಾಶೆಯ ಮಾತುಗಳನ್ನು ಕೇಳಿ ತುಸು ವಿಷಾದ ಪಟ್ಟನು. ಮನಸು ಕರಗಿಸುವ ಅಂಥ ಕರುಣಾವಚನಗಳನ್ನು ಕೇಳಿ ಯಾರು ಮರಗರು? ಇರಲಿ.

ಮಾಲತಿಯು ಕಣ್ಣೀರು ಸುರಿಸುತ್ತ ಲವಂಗಿಕೆಯ ಪಾದಗಳ ಮೇಲೆ ಬಿದ್ದ ಸಮಯದಲ್ಲಿಯೇ ಲವಂಗಿಕೆಯು ಸನ್ನೆಯಿಂದ ಮಾಧವನನ್ನು ಕರೆದು ತಾನಿದ್ದೆಡೆಯಲ್ಲಿ ನಿಲ್ಲಲಿಕ್ಕೆ ಹೇಳಿದಳು. ಮಾಧವನು ನಾಚಿಕೆಯಿಂದ ಮೊದಲು ತುಸು ಹಿಂದು ಮುಂದೆ ನೋಡಿ ಕಡೆಗೆ ಮೆಲ್ಲನೆ ಹೋಗಿ ಲವಂಗಿಕೆಯ ಸ್ಥಾನದಲ್ಲಿ ನಿಂತನು. ಮಾಲತಿಯು ಈ ಮೋಸವನ್ನರಿಯದೆ— "ನನ್ನಮೇಲೆ ತೀವ್ರ ಅನುಗ್ರಹ ಮಾಡು"— ಎಂದು ಪುನಃ ಬೇಡಿಕೊಳ್ಳಲು, ಮಾಧವನು ತನ್ನ ಧ್ವನಿಯನ್ನಡಗಿಸಿ— "ಪ್ರಿಯೇ ಇಂಥ ಅನುಚಿತ ಸಾಹಸಕ್ಕೆ ಹೀಗೇಕೆ ಆತುರಪಡುವೆ? ನಿನ್ನನ್ನಗಲಿ ನಾನಾವ ಕಾಡು ಸೇರಲಿ? ನಿನ್ನ ವಿರಹ ದುಃಖವನ್ನು ತಾಳಲಾರೆನಾದ ಕಾರಣ ಈ ಹುಚ್ಚುತನವ ಬಿಟ್ಟು ಬಿಡು."— ಎಂದು ಸಣ್ಣ ದನಿಯಿಂದ ತನ್ನ ಗುರುತು ತಿಳಿಯಗೊಡದೆ ಮೆಲ್ಲನೆ ನುಡಿದನು; ಆದರೆ ಮಾಲತಿಯು ತೀರ ಕೇಳಲೊಲ್ಲಳು. ಹೆಂಗಸರ ಪ್ರೀತಿಯೇ ಅಂಥದು. ಒಮ್ಮೆ ಒಬ್ಬ ಪುರುಷನಿಗೆ ಮೆಚ್ಚಿದರೆಂದರೆ ಜೀವಕ್ಕೆರವಾದರೂ ಪರ ಪುರುಷರನ್ನು ಕಣ್ಣೆತ್ತಿ ನೋಡುವದಿಲ್ಲ. ಮಾಲತಿಯಂತೂ ಮನೆತನಸ್ಥಳು. ಬದುಕಿ ಪೇಚಾಡುವದಕ್ಕಿಂತಲು ನೀಗಿಹೋದರೆ ಯಾವತೊಂದರೆಯೂ ಇಲ್ಲವೆಂದೆಣಿಸಿ ಲವಂಗಿಕೆಯೆಂಬ ನಂಬಿಕೆಯಿಂದಲೇ ಮಾಧವನಿಗೆ ತಿರುಗಿ ಆಗ್ರಹದಿಂದ ಬಿನ್ನಹಗೈಯಲು, ಮಾಧವನು ತನ್ನ ಕೆಲಸವು ಕೈಗೂಡುವದೆಂಬ ಹರುಷದಿಂದ-- "ಸಖಿಯಳೇ, ಹೇಳುವದನ್ನೆಲ್ಲ ಹೇಳಿ ನೋಡಿದೆನು. ನೀನು ಹೀಗೆ ಹಟಹಿಡಿದರೆ ನಾನೇನು ಹೆಚ್ಚಿಗೆ ಹೇಳಲಿ? ನಿನಗೆ ಸರಿಬಂದಂತೆ ಮಾಡು; ನನ್ನದೇನೂ ಅಡ್ಡಿಯಿಲ್ಲ. ಆದರೆ ಮೊದಲು ನನಗೆ ಆಲಿಂಗನವನ್ನು ಕೊಡು"— ಎನಲು ಮಾಲತಿಯು ಸಂತೋಷದಿಂದ ಲವಂಗಿಕೆಯು ತನ್ನ ಮೇಲೆ ಅನುಗ್ರಹ ಮಾಡಿದಳೆಂದು ಹಿಗ್ಗಿ, ಎದ್ದು ನಿಂತು ಕಂಬನಿಗಳಿಂದ ತುಂಬಿದ ಕಂಗಳಿಂದ ಮಾಧವನೆಂಬ ಅರುವಿಲ್ಲದೆ ಮಾಧವನ ಕೊರಳಲ್ಲಿ ಕೈಹಾಕಿ ದೀನಸ್ವರದಿಂದ— "ಗೆಳತೀ, ನನ್ನ ಮೇಲೆ ನೀನು ಒಳ್ಳೇ ಉಪಕಾರವ ಮಾಡಿದೆ. ಆದರೆ ಇನ್ನೊಂದು ಮಾತು ಮಾತ್ರ ನನ್ನದು ನಡಿಸಬೇಕು; ಅದೇನೆಂದರೆ, ನೀನು ಆ ಮಹಾರಾಯನನ್ನು ಕಂಡು ವಿನಯದಿಂದ ತಲೆಬಾಗಿ ಕೈಮುಗಿದು— 'ದೈವಗೇಡಿಯಾದ-ಮಾಲತಿಯು ಬಿಳಿದಾವರೆಯ ಸೊಂಪಡಗಿಸುವ ನಿನ್ನ ಮುಖಚಂದ್ರಮನನ್ನು ಮನದಣೇನೋಡಿ ಕಂಗಳ ಬಯಕೆಯನ್ನಾದರೂ ತೀರಿಸಿ ಕೊಳ್ಳಲಿಲ್ಲ;

ವೃಥಾಮನೋರಥಗಳಿಂದ ಮನಸಿನ ಹಂಬಲಿಕೆಯನ್ನು ಮಾತ್ರ ಹೆಚ್ಚಿಸಿಕೊಂಡಳು; ತಾಳಲಾರದ ಶರೀರ ಸಂತಾಪದಿಂದ ಜೀವದ ಗೆಳತಿಯರಿಗೆ ಸಹ ಬಾರಿಬಾರಿಗೆ ಬೇಸರಾದಳು; ದುರುಳ ಚಂದಿರನೂ ಹಗೆಯಾದ ಮಲಯಮಾರುತನೂ ಬಿಡದೆ ಕಾಡಿಸಿದರೂ ಮುಂದಿನ ಆಶೆಯಿಂದ ತಡಕೊಂಡಳು; ಆದರೆ ಕಟ್ಟಕಡೆಗೆ ನೀರೊಳಗೆ ಮಾಡಿದ ಹೋಮದಂತೆ ಎಲ್ಲ ಹುಸಿಯಾಯಿತು. ಆದರೂ ಮಾಲತಿಯ ಸ್ಮರಣೆಯು ಮಾತ್ರ ನಿಮಗೆ ಇರಬೇಕು!— ಹೀಗೆಂದು ನನ್ನ ಹೆಸರಿನಿಂದ ಅರಿಕೆ ಮಾಡು. ನೀನಾದರೂ ನನ್ನನ್ನು ಮರಿಯ ಬೇಡ ಕಂಡೆಯಾ? ಇಕೋ! ಇದು ಶ್ರೀಮಾಧವನು ತನ್ನ ಸ್ವಂತ ಕೈಯಿಂದ ಕಟ್ಟಿದ ಮನೋಹರವಾದ ಬಕುಳ ಮಾಲೆಯು; ಇದನ್ನು ಬಲು ಜೋಕೆಯಿಂದ ಆವಾಗಲು ಕೊರಳಲ್ಲಿ ಹಾಕಿಕೊಂಡು ನನ್ನಂತೆ ಜೋಪಾನಮಾಡು." ಹೀಗೆಂದು ಬಕುಳಹಾರವನ್ನು ತೆಗೆದು ಕೊರಳಲ್ಲಿ ಹಾಕಹೋದವಳು ಮಾಧವನ ರೂಪವನ್ನು ನೋಡಿ ಬೆರಗಾಗಿ ಭೀತಿಯಿಂದ ಒಮ್ಮೆಲೆ ಹಿಂದೆ ಸರಿದಳು.

ಮಾಲತಿಯ ಶೀತಸಂಪರ್ಕದಿಂದ ಕಾಮದಗ್ಧನಾದ ಮಾಧವನಿಗಾದ ಸಮಾಧಾನವು ಮೇರೆದಪ್ಪಿತು; ಲೋಕದಲ್ಲಿ ಶೀತಲನೆಂದು ಹೆಸರಾದ ಪಚ್ಚಕರ್ಪೂರ, ಹರಿಚಂದನ, ಚಂದ್ರಕಾಂತ, ನೀರಾವು, ತಾವರೆದೇಟು ಮುಂತಾದ ತಣ್ಣನ್ನ ಪದಾರ್ಥಗಳನ್ನು ಒಟ್ಟುಗೂಡಿಸಿ ಹಿಂಡಿ ರಸವನ್ನು ಮೈಗೆ ತೊಡೆದರೆ ಆಗುವಷ್ಟು ಆನಂದವು ಮಾಲತಿಯ ಪೀನಕುಚಗಳ ಸ್ಪರ್ಶದಿಂದ ಮಾಧವನಿಗಾಯಿತು. ಅನಂತರದಲ್ಲಿ ಮಾಧವನು ಮಾಲತಿಯನ್ನು ಕುರಿತು— "ಎಲೈ ಪರದುಃಖ ಶೀತಲೇ, ನಿನ್ನ ವೇದನೆಯನ್ನು ಮಾತ್ರ ಒಬ್ಬರಿಗೆ ಹೇಳುವೆ; ಆದರೆ ನಿನ್ನ ಸಲುವಾಗಿ ಮಿಡುಕುವವರ ಮನಸ್ತಾಪವನ್ನು ನೀನೇನು ಬಲ್ಲೆ? ನಿನಗೋಸ್ಕರ ನನಗುಂಟಾದ ವ್ಯಥೆಯು ನನ್ನ ಮನಸಿಗೇ ಗೊತ್ತು; ಆದರೂ ಒಮ್ಮೊಮ್ಮೆ ನಿನ್ನ ಮಾನಸಿಕ ಸಮಾಗಮದಿಂದ ಅಲ್ಪ ಸ್ವಲ್ಪ ಶಾಂತಿಯು ನನಗಾಗುತ್ತಿತ್ತು. ಮುಂದಣಾಶೆಯಿಂದಲೇ ಜೀವ ಹಿಡಿದುಕೊಂಡು ಹೊತ್ತುಗಳೆಯುತ್ತಿದ್ದೆನು; ಎರಡನೆಯ ಹವ್ಯಾಸವು ನನಗಿದ್ದಿಲ್ಲ." ಎಂದು ನುಡಿದನು.

ಇಷ್ಟರಲ್ಲಿ ಅಡಗಿಕೊಂಡಿದ್ದ ಮಕರಂದನು ಮುಂದೆ ಬಂದು— "ಮಹಾಭಾಗಳೇ! ಮಾಧವನು ಹೇಳುವದು ನಿಜವು. ನೀನು ಪ್ರೀತಿಸುತ್ತೀಯೆಂಬ ನಂಬುಗೆಯಿಂದಲೇ ನನ್ನ ಗೆಳೆಯನು ಇಷ್ಟು ದಿನ ಹೇಗಾದರೂ ತರಹರಿಸಿದನು. ಆದರೆ ಈಗ ಒಳ್ಳೇ ಸಂಧಿಯು ಒದಗಿರುವದು. ವಿಧಿಪೂರ್ವಕವಾಗಿ ಗೆಳೆಯನ ಪಾಣಿಗ್ರಹಣವ ಮಾಡಿ ಎಲ್ಲರನ್ನು ಸಂತೋಷಪಡಿಸು."— ಎಂದುದಕ್ಕೆ ಲವಂಗಿಕೆಯು— "ಪ್ರೀತಿಯ ವಿವಾಹದಲ್ಲಿ ವಿಧಿಯೇತಕ್ಕೆ, ಪಾಣಿಗ್ರಹಣವೇತಕ್ಕೆ! ಮನಸಿನಿಂದಲೇ ಮಾಲತಿಯು ಪ್ರಿಯನನ್ನು ವರಿಸಿರುವಳು."— ಎಂದು ಅಂದಳು.

ಇಂಥ ಸಾಹಸದ ನುಡಿಯ ಕೇಳಿ ಮನಸಿನಲ್ಲಿದ್ದರೂ ಮಾಲತಿಯು ತುಸು ಹಿಂಜರಿದಳು. ಏಕೆಂದರೆ ಕುಲಶೀಲರಾದ ಕನ್ನಿಕೆಯರಿಗೆ ದೈವ, ಆರ್ಷ, ಬ್ರಾಹ್ಮ, ಎಂಬ

ಮೂರು ತರದ ವಿವಾಹ ವಿಧಿಗಳೇ ಮಾತ್ರ ಶುಭದಾಯಕಗಳೆಂದು ಹೇಳಿರುತ್ತಾರೆ. ಸ್ವಯಂವರಾದಿ ಮಿಕ್ಕವಿಧಿಗಳು ಕೀಳತರದವೆಂದೆನಿಸುತ್ತವೆ. ಆದರೆ ಈ ಪ್ರಸಂಗದಲ್ಲಿ ಶಾಸ್ತ್ರಸಮ್ಮತವಾದ ವಿಧಿಯಿಂದ ಕಾರ್ಯವನ್ನು ನೆರವೇರಿಸುವದು ಸ್ವಲ್ಪ ಕಷ್ಟವಿತ್ತು. ಆದುದರಿಂದ ಶಿಷ್ಟಳಾದ ಕಾಮಂದಕಿಯು ಸಮ್ಮತಿಯನ್ನು ಪಡಕೊಂಡು ಸ್ವಯಂವರದ ಕಾರ್ಯವನ್ನು ಜರಗಿಸುವದೇ ವಿಹಿತವೆಂದೆಣಿಸಿ, ಕುಶಲಳಾದ ಲವಂಗಿಕೆಯು ಹೊರ ಗಿದ್ದ ಕಾಮಂದಕಿಗೆ ಸನ್ನೆ ಗೈಯಲು ಕಾಮಂದಕಿಯು ಒಳಗೆ ಬಂದು, ಕಕ್ಕಸದಿಂದ ಅಳುವ ಮಾಲತಿಯನ್ನು ತಬ್ಬಿ, ಗದ್ದವನ್ನು ಹಿಡಿದು ಸಂತೈಸಿ— "ಮಗುವೇ, ನಡಗುವಿ ಯೇಕೆ? ನಮ್ಮಿರ್ವರ ಪರಸ್ಪರ ಸಂದುರುಶನವಾದಂದಿನಿಂದ ಮನದಲ್ಲಿ ಪ್ರೇಮವು ತಾನೇ ಹುಟ್ಟಿ ಬಲವಾಗಿ ನೆಲೆಗೊಂಡಿರುತ್ತದೆ. ನಿನಗೋಸ್ಕರ ಮಾಧವನೂ, ಮಾಧ ವನಿಗೋಸ್ಕರ ನೀನೂ ಈ ವರೆಗೆ ನಿರುಪಾಯರಾಗಿ ಹಲುಬಿದಿರಿ. ಈಗ ನಮ್ಮ ಸುದೈವ ದಿಂದಲೂ ಗುರು ಹಿರಿಯರ ಪುಣ್ಯದಿಂದಲೂ ನಿಮ್ಮಿರ್ವರ ಸಮಾಗಮಕ್ಕೆ ಒಳ್ಳೇ ಸಮ ಯವು ಒದಗಿರುವದು. ತರುಳನಾದ ನಿನ್ನ ಪ್ರಿಯಕರನೂ ಇಲ್ಲೇ ಇರುವನು. ಇನ್ನು ಸುಮ್ಮನೆ ಹೊತ್ತುಗಳೆಯುವದೇತಕ್ಕೆ? ಮನದೊಳಗಿನ ಸಂದೇಹವನ್ನು ಬಿಟ್ಟುಬಿಡು. ನಿಮ್ಮಿರ್ವರನ್ನು ಹುಟ್ಟಿಸಿದ ಸೃಷ್ಟಿಕರ್ತನೂ ನಿಮ್ಮ ಪ್ರೇಮವೆಂಬ ಬಳ್ಳಿಯನ್ನು ನೀರೆರೆದು ಹಬ್ಬಿಸಿದ ಮದನನೂ ಧನ್ಯರಾಗಲಿ." ಎಂದಳು.

ಲವಂಗಿಕೆ— "ಅಮ್ಮಾ, ಈ ಎದೆಗಾರನಾದ ಮಾಧವನನ್ನು ಕಂಡು ಈಕೆಯು ಬೆದರದಿರುವಳೇ? ಆ ದಿವಸ ಅಮಾವಾಸಿಯ ಇರುಳೊಳಗೆ ಮಸಣದಲ್ಲಿ ಒಬ್ಬನೇ ಹೋಗಿ ಆ ಚಾಂಡಾಲನನ್ನು ರಟ್ಟೆಯ ಕಸುವಿನಿಂದ ಮೆಟ್ಟಿ ಸೀಳಿ, ಮಾಲತಿಯ ಜೀವದಾನ ಮಾಡಿದ ಮಾಧವನ ದಿಟ್ಟತನವೇನು? ಕಡಿಮೆಯದೆ? ಹಾಗಂತೇ ಮಾಲತಿಯು ನಡ ಗುವಳು." ಎಂದಳು.

ಲವಂಗಿಕೆಯ ಈ ಸಮಯೋಚಿತ ನುಡಿಗೆ ಎಲ್ಲರು ತಲೆದೂಗಿದರು. ಮಾಧವನು ತನ್ನ ಮೇಲೆ ಮಾಡಿದ ಮಹದುಪಕಾರವು ನೆನಪಿಗೆ ಬಂದ ಮೇಲೆ ಮಾಲತಿಯು ತನ್ನ ಶರೀ ರವನ್ನು ಅವನಿಗರ್ಪಿಸದಿದ್ದರೆ ಜನರೇನಂಬುವರು? ಈ ತರದ ವಿಚಾರದಿಂದ ಮಾಲ ತಿಯು ಪೇಚಾಟದಲ್ಲಿ ಬಿದ್ದಿರಲು ಕಾಮಂದಕಿಯು ಮಾಧವನನ್ನು ಕುರಿತು— "ಮಾಧ ವನೇ ಸಕಲ ಸಾಮಂತರಿಂದ ಅಡಿಗಳಿಗೆರಗಿಸಿಕೊಂಡು ಬಹುಮಾನಿತನಾದ ಅಮಾತ್ಯ ಭೂರಿವಸುವಿನ ಒಬ್ಬಳೇ ಮಗಳಾದ ಮಾಲತಿಯನ್ನು, ಉಚಿತ ಸಂಯೋಗಮಾಡುವದ ರಲ್ಲಿ ಕುಶಲನಾದ ವಿಧಿಯೂ ಮದನನೂ ನಾನೂ ನಿನ್ನ ಸೆರಗಿನಲ್ಲಿ ಹಾಕಿರುತ್ತೇವೆ. ಸಲುವಳಿಯಿಂದ ಸಲಹಬೇಕು ಕಂಡೆಯಾ?"— ಎಂದು ಕಣ್ಣೀರು ತಂದು ಅಳಹತ್ತಿದಳು.

ಮಾಧವ— "ಅಮ್ಮಾ, ನೀವೇಕೆ ಅಳುವಿರಿ!"

ಕಾಮಂದಕೀ— (ಶಾಟಿಯ ಅಂಚಿನಿಂದ ಕಣ್ಣೊರಿಸಿಕೊಂಡು) ಮಗುವೇ, ನನ್ನ ದೊಂದು ಬಿನ್ನಪವನ್ನು ಕೇಳು.

 

ಮಾಧವ— ಛೀ! ಛೀ! ಅಪ್ಪಣೆಯಾಗಬೇಕು.

ಕಾಮಂದಕೀ— "ನಿವ್ಮ್ಮೀರ್ವರ ಒಲುಮೆಯು ಕೊನೆಯಲ್ಲಿ ಸವಿಯಾದುದಂತೂ ಒಳಿತಾಯಿತು. ಆದರೆ ನಾನು ನಿನಗೆ ಎಲ್ಲರೀತಿಯಿಂದಲೂ ಮಾನ್ಯಳಿದ್ದುದು ನಿಜ ವಿದ್ದರೆ, ಈ ಸುಂದರಿಯನ್ನು ನನ್ನ ಪರೋಕ್ಷದಲ್ಲಿ ಕೂಡ ಅಂತಃಕರಣ ಪೂರ್ವಕ ವಾಗಿ ನಡಿಸಿಕೊಳ್ಳತಕ್ಕದ್ದು ಕಂಡಿಯಾ? ಇದರಲ್ಲಿ ಎಳ್ಳಷ್ಟಾದರೂ ತಪ್ಪಕೂಡ ದು."— ಹೀಗೆಂದು ಮಾಧವನಡಿಗಳಿಗೆರಗಲುದ್ಯುಕ್ತಳಾಗಲು, ಮಾಧವನು— "ಛೀ ಛೀ, ಬೇಡ ಬೇಡ" ವೆಂದು ಎಬ್ಬಿಸಿದನು.

ಹೆಣ್ಣು ಮಕ್ಕಳು ಮದುವೆಯಾಗಿ ಮುಂದೆ ಗಂಡನ ಮನೆಗೆ ಹೋದರೆಂದರೆ ಅಲ್ಲಿ ಹೇಗಿರುವರೋ, ಗಂಡನು ಹೆಂಡತಿಯನ್ನು ಹೇಗೆ ನಡಿಸಿಕೊಳ್ಳುವನೋ, ಎಂಬ ಬಗ್ಗೆ ಹಡದ ತಾಯಿಗೂ ಹತ್ತಿ ಹೊಂದಿದವರಿಗೂ ಮನಸಿನಲ್ಲಿ ಹಳವಂಡವಿರು ತ್ತದೆ. ಕಾಮಂದಕಿಯು ಮಾಲತಿಯನ್ನು ತನ್ನ ಸ್ವಂತ ಮಗಳಂತೆ ತಿಳಿದು ಪ್ರೀ ತಿಯಿಂದ ಆರಯಿಸುತ್ತಿದ್ದಳು. ಆದುದರಿಂದ ಮಾಲತಿಯ ಬಗೆ ಆಕೆಯ ಮನಸಿನಲ್ಲಿ ಹಳಹಳಿಯುಂಟಾಗುವದು ಸಹಜವು. ಮಾಧವನ ಮೇಲಾ ದರೂ ವಿಶೇಷ ಮಮತೆಯಿದ್ದುದರಿಂದ ಸಲುಗೆಯಿಂದ ಅವನ ಕಾಲು ಬೀಳಹೋದುದಾ ಶ್ಚರ್ಯವಲ್ಲ. ಆದರೆ ಮಾಲತಿಯ ಬಗ್ಗೆ ಮಾಧವನಿಗಿಷ್ಟು ಕಾಲುಬಿದ್ದು ಹೇಳಿಕೊಳ್ಳುವ ಅಗತ್ಯವಿದ್ದಿಲ್ಲ. ಏಕೆಂದರೆ ಮಾಧವನ ಮನವೊಲಿಸಿ ತನ್ನ ವಶಮಾಡಿಕೊಳ್ಳುವ ಗುಣಗಳ ಕೊರತೆಯು ಮಾಲತಿಗೆ ಇದ್ದಿಲ್ಲ. ಮೊದಲೇ 'ಚಲುವೆಯು; ಮಾಧವನ ಮೇಲಿನ ಪ್ರೇಮ ವಾದರೂ ತೀವಿ ಸೂಸುತ್ತಿತ್ತು. ಇದಲ್ಲದೆ ಮನೆತನಸ್ಥಳಾದುದರಿಂದ ನಡೆನುಡಿಗಳಲ್ಲಿ ಲೇಶವಾದರೂ ಕೊಂಕುಕೊರತೆಗಳಿದ್ದಿಲ್ಲ. ಇಂಥ ಸದ್ಗುಣಲಾವಣ್ಯವತಿಯಾದ ಕಾಮಿನಿ ಯನ್ನು ಮದುವೆಯಾದ ಪುರುಷನು ದುಃಖವೆಂಬದನ್ನು ಕನಸಿನಲ್ಲಿ ಕೂಡ ಕಾಣನು. ಆದರೂ ದೇಶಾಚಾರದ ವಾಡಿಕೆಯನ್ನನುರೋಧಿಸಿ ನಾಲ್ಕು ಒಳ್ಳೆಯ ಮಾತುಗಳನ್ನು ಹೇಳುವದವಶ್ಯವೆಂದೆಣಿಸಿ ಕಾಮಂದಕಿಯು ಮಾಲತಿಯನ್ನೂ ಮಾಧವನನ್ನೂ ಬಳಿಯಲ್ಲಿ ಕರೆದು ಕುಳ್ಳಿರಿಸಿ—"ಮಕ್ಕಳಿರಾ! ಹೆಣ್ಣುಮಕ್ಕಳಿಗೆ ಗಂಡಂದಿರೂ, ಗಂಡಸರಿಗೆ ಹೆಂಡಂ ದಿರೂ ಎಲ್ಲಕ್ಕೂ ಹಿರಿದೆನಿಸುವರು. ಒಬ್ಬರನ್ನೊಬ್ಬರು ಜೀವದ ಗೆಳೆಯರಂತೆಯೂ ಮಮ ತೆಯ ಬಳಗದಂತೆಯೂ ತಿಳಿದು ಬಾಳುವೆ ಮಾಡತಕ್ಕದ್ದು. ಈ ಸಂಸಾರದ ಎಲ್ಲ ಬಯಕೆ ಗಳೂ ಎಲ್ಲ ಸಂಪತ್ತೂ ಗಂಡಹೆಂಡರ ಹೊಂದಿಕೆಯಿಂದಲೇ ಕೈಸೇರುತ್ತವೆ. ದೇಹದಿಂದ ಬೇರೆಯಾದರೂ, ಒಂದೇ ಮನಸಿನಿಂದಲೂ ಒಂದೇ ಜೀವದಿಂದಲೂ ಒಗತನಮಾಡುವ ಸತಿಪತಿಯರೇ ಸಂಸಾರಸುಖವೆಂಬ ಮಿಗಿಲಾದ ಸೌಖ್ಯಕ್ಕೆರವಾಗರು. ಮಿಕ್ಕಾದವರು ಜೇಸಿನಲ್ಲಿ ಬಿದ್ದು ಒದ್ದಾಡುವ ನೊಣದಂತೆ ತಾವೂ ತೊಳಲಿ ಜನರಿಗೂ ಹೇಸಿಕೆಯನ್ನುಂಟು ಮಾಡುವರು. ಈ ಮಾತನ್ನು ಚನ್ನಾಗಿ ನೆನಪಿನಲ್ಲಿರಿಸಿ ವರ್ತಿಸತಕ್ಕದ್ದು ಕಂಡಿರಾ"—

ಹೀಗೆಂದು ಇಬ್ಬರ ತಲೆಯಮೇಲೂ ಕೈಯಾಡಿಸಿ ಹರಸಲು, ಮಾಲತಿಯೂ ಮಾಧವನೂ ಅದಕ್ಕೆ ತಲೆವಾಗಿ ವಂದನಂಗೈದು ಒಪ್ಪಿಕೊಂಡರು.

ಮುಂದೆ ಮಾಡುವ ಕೆಲಸವು ದಿಕ್ಕಿಲ್ಲದಿತ್ತು. ಕಾಮಂದಕಿಯು ಹಾಕಿದ ಹಂಚಿಕೆಯು ಇಲ್ಲಿಯೇ ಕಡೆಗಾಣಲಿಲ್ಲ. ಊರಲ್ಲಿ ನಂದನನ ಮದುವೆಯ ಏರ್ಪಾಡು ದೊರೆಗಳಪ್ಪಣೆಯಿಂದ ನಡೆದಿರಲು, ಮಾಲತಿಯು ಇಲ್ಲಿಯೇ ಕುಳಿತುಕೊಂಡರೆ ಹೇಗಾದೀತು? ಇದಲ್ಲದೆ. ಮದಯಂತಿಕೆಯಗೂಡ ಮಕರಂದನ ಮದುವೆಯ ಸಂಧಾನವನ್ನು ಇದೇ ಪ್ರಸಂಗದಲ್ಲಿ ಸಾಧಿಸಬೇಕೆಂದು ಕಾಮಂದಕಿಯು ಹವಣಿಸುತ್ತಿದ್ದಳು. ಇಷ್ಟೆಲ್ಲ ಎಡರಿಲ್ಲದೆ ನೆರವೇರಬೇಕಾದರೆ ಅಂಥ ಇಂಥ ಚಾತುರ್ಯದ ಕೆಲಸವಲ್ಲ. ಮಾಲತಿಯನ್ನು ಊರಲ್ಲಿ ತಿರುಗಿ ಹೋಗಗೊಟ್ಟರೆ ನಂದನನಗೂಡ ಅವಳ ವಿವಾಹವು ಆಗಿಹೋಗುವದೆಂಬದಕ್ಕೆ ಸಂದೇಹವಿದ್ದಿಲ್ಲ; ಹೋಗಗೊಡದಿದ್ದರೆ ಊರಲ್ಲಿ ಬೊಬ್ಬಾಟವಾಗುವದು. "ಒಂದುಕಡೆ ಬಾವಿ, ಒಂದುಕಡೆ ಕೆರೆ," ಎಂಬ ನ್ಯಾಯದಂತೆ ಕಾಮಂದಕಿಯು ಪೇಚಾಟದಲ್ಲಿ ಬಿದ್ದಳು. ಆದರೂ ತೀವ್ರ ಬುದ್ಧಿಯವಳಂತೇ ಎದೆಗುಂದಲಿಲ್ಲ. ಶಾಂತಚಿತ್ತದಿಂದ ಕೆಲಹೊತ್ತು ದೇನಿಸಿ, ಕಡೆಗೆ ಒಂದು ಒಳ್ಳೇ ಎತ್ತುಗಡೆಯನ್ನು ತೆಗೆದಳು. ಮಾಲತಿಯೋಸುಗ ವಸ್ತ್ರಾಲಂಕಾರಗಳನ್ನು ದೊರೆಗಳು ಕಳುಹಿಸಿದ್ದರಷ್ಟೇ? ಆ ಉಡಿಗೆತೊಡಿಗೆಗಳಿಂದಲೇ ತರುಳನಾದ ಮಕರಂದನಿಗೆ ಮಾಲತಿಯ ಸೋಗುಹಾಕಿ ನಂದನನ ಲಗ್ನಕ್ಕೆ ಕಳುಹಿಸಿಬಿಡಬೇಕೆಂದು ಯೋಚಿಸಿದಳು; ಹೀಗೆ ಮಾಡಿದರೆ ಮಕರಂದನಿಗೆ ಮದಯಂತಿಕೆಯೂ ಒಂದು ಬಗೆಯಿಂದ ದೊರೆಯಬಹುದೆಂದೆಣಿಸಿ, ಒಡವೆಗಳ ಸಂದುಕವನ್ನು ಮಕರಂದನ ಕೈಯಲ್ಲಿ ಕೊಟ್ಟು, ಮಾಲತಿಯ ವೇಷಹಾಕಿಕೊಂಡು ಬರಹೇಳಿದಳು. ಮಕರಂದನು ಒಳಗೆ ಹೋಗಿ ಕಾಮಂದಕಿಯು ನಿರೂಪಿಸಿದ ಮೇರೆಗೆ ವೇಷತಾಳಿ ಬಂದನು. ಮಾಲತಿಯ ಸೋಗು ಧರಿಸಿದ ಮಕರಂದನನ್ನು ನೋಡಿ ಮಾಧವನು ಕೌತುಕಬಟ್ಟು ಗೆಳೆಯನನ್ನು ತಕ್ಕೈಸಿ– "ಓಹೋ! ಇಂಥ ಮಾಲತಿಯು ದೊರೆದಬಳಿಕ ಕೇಳುವದೇನು? ನಂದನನು ಧನ್ಯನಾಗುವನು." — ಎಂದು ನಗೆಮಾತು ಆಡಿದನು.

ಹೀಗೆ ನಗರದೇವತೆಯ ದೇಗುಲದಲ್ಲಿ ಸಂಗತಿಗಳು ನಡೆದಿರಲು, ಕಾಮಂದಕಿಯ ತೊತ್ತಾದ ಅವಲೋಕಿತೆಯು ಅವಳಪ್ಪಣೆಯನುಸಾರವಾಗಿ ವಿಹಾರದ ಹಿಂದಿರುವ ತೋಟದಲ್ಲಿ ಮಾಲತೀಮಾಧವರ ಮದುವೆಯ ಜೋಡಣೆಯನ್ನು ನಡಿಸಿದ್ದಳು. ಇವರ ಲಗ್ನಸಮಾರಂಭಕ್ಕೆ ಆ ತೋಟವು ತಕ್ಕ ಸ್ಥಳವಾಗಿತ್ತು; ಬಗೆಬಗೆಯ ಹೂಗಿಡಗಳಿಂದಲೂ ಕಾಯಿ ಗಿಡಗಳಿಂದಲೂ ಬಲು ರಮಣೀಯವಾಗಿದ್ದುದಲ್ಲದೆ, ಪತಿವಿರಹದಿಂದುತ್ಕಂಠಿತರಾದ ಕೇರಳ ಸ್ತ್ರೀಯರ ಕಪೋಲಗಳಂತೆ ಬಿಳುಪಾದ ವೀಳೆಯೆಲೆಗಳ ಬಳ್ಳಿಗಳಿಂದ ಸುತ್ತಿಕೊಂಡ ಎತ್ತರವಾದ ಅಡಿಕೆ ತೆಂಗು ಮುಂತಾದ ಮರಗಳಿಂದಲೂ, ಕಂಕೋಳೀಕಾಯಿಗಳನ್ನು ತಿಂದು ಹರ್ಷಿತವಾದ ಹಕ್ಕಿಗಳ ಕಿಲಿಬಿಲಿ ಸಪ್ಪಳದಿಂದಲೂ, ಬೀಸುವ ಗಾಳಿ

ಯಿಂದ ತೂಗಾಡುವ ಲವಂಗ ನಿಂಬೆ ಮಾದಾಳ ಮುಂತಾದ ವೃಕ್ಷಗಳಿಂದಲೂ ಮಂಗಳಕರವಾಗಿತ್ತು. ಈ ತೋಟಕ್ಕೆ ಮೊದಲು ಹೋಗಿ ಅಲ್ಲಿ ಮಕರಂದನೂ ಮದಯಂತಿಕೆಯೂ ಬರುವವರೆಗೆ ದಾರಿಯ ಕಾಯುತ್ತ ಕುಳಿತುಕೊಳ್ಳಿರೆಂದು ಮಾಲತೀಮಾಧವರಿಗೆ ಕಾಮಂದಕಿಯು ಹೇಳಿದಳು. ಆ ಮೇಲೆ ತಾನು ಮಾಲತಿಯ ರೂಪವನ್ನು ಧರಿಸಿದ ಮಕರಂದನನ್ನೂ ಲವಂಗಿಕೆಯನ್ನೂ ಕೂಡಿಕೊಂಡು ಹೊರಬಿದ್ದು ಮೆರವಣಿಗೆಯ ಸಮಾರಂಭದೊಡನೆ ತಿರುಗಿ ನಗರದ ಕಡೆಗೆ ಸಾಗಿದಳು. ತನ್ನೊಬ್ಬಳನ್ನೇ ಬಿಟ್ಟು ಲವಂಗಿಕೆಯು ಸಹ ಹೊರಟುಹೋದುದನ್ನು ಕಂಡು, ಹೆಂಗಸರಿಗೆ ಸ್ವಾಭಾವಿಕವಾದ ನಾಚಿಕೆಯಿಂದ ಮಾಲತಿಯು ತುಸು ಎದೆಗುದಿಪಟ್ಟಳು. ಆದರೆ ಮಾಧವನಿಗೇನು? ಆನಂದದಲ್ಲಿಯೇ ಮುಳುಗಿದ್ದನು. ಬೇಸಿಗೆಯ ಬಿಸಲಿನಿಂದ ಬಳಲಿದ ಕಾಡಾನೆಯು ತಿಳಿಗೊಳದಲ್ಲಿ ಬೆಳೆದ ಮುಳ್ಳುದೇಟುಳ್ಳ ಕಮಲಗಳನ್ನೂ ಹಸಿಕೆಂದಾವರೆಗಳನ್ನೂ ತನ್ನ ಸೊಂಡೆಯಿಂದೆಳೆದೆಳೆದು ಶಾಂತಿಯನ್ನು ಹೊಂದುವಂತೆ, ರೋಮಾಂಚದಿಂದ ಯುಕ್ತವಾದ ಮಾಲತಿಯ ಭುಜಗಳನ್ನೂ ಬೆವರಿದ ಅವಳ ಕೋಮಲ ಕರಗಳನ್ನೂ ತನ್ನ ಕರದಿಂದ ಸ್ಪರ್ಶಮಾಡಿ ಮದನತಾಪದ ಉರಿಯನ್ನು ಎಂದು ನೊಂದಿಸುವೆನೋ ಎಂಬಂತೆ ಮಾಧವನಿಗಾಗಿತ್ತು. ಅಂಥ ಸಮಯವು ದೈವಸಂಕಲ್ಪದಿಂದಲೂ ಕಾಮಂದಕಿಯ ಅದ್ವಿತೀಯವಾದ ಕುಶಲತನದಿಂದಲೂ ಆ ಹೊತ್ತು ಒದಗಿ ಬಂದುದರಿಂದ ಮಾಧವನು ಕಡುಹರ್ಷಿತನಾಗಿ, ಮಾಲತಿಯೊಂದಿಗೆ ವಿಹಾರದ ತೋಟದಕಡೆ ಹೊರಟುಹೋದನು.

---

( ಮಾಲತಿಯೋಪಹಾರವೆಂಬ ಆರನೆಯ ಅಧ್ಯಾಯವು. )



## ೭ನೆಯ ಅಧ್ಯಾಯವು.



ಹಿಂದೆ ಹೇಳಿದಂತೆ? ಮಾಲತಿಯ ವೇಷವನ್ನು ತಾಳಿದ ಮಕರಂದನು ಮೆರವಣಿಗೆಯ ಉತ್ಸವದಗೂಡ ಪಟ್ಟಣವನ್ನು ಸೇರಿದ ಮೇಲೆ, ಆರ ಮನಸ್ಸಿನಲ್ಲಿಯೂ ಸಂಶಯ ಹುಟ್ಟದೆ ಲಗ್ನಸಮಾರಂಭವು ವಿಧಿಪೂರ್ವಕವಾಗಿ ಜರುಗಿತು. ಮಕರಂದನು ಕೆಂಪುಮೈಬಣ್ಣದವನಾದುದರಿಂದಲೂ, ಮೋರೆಯಮೇಲೆ ಹರೆಯದ ಕುರುಪುಗಳು ಇನ್ನೂ ತಲೆದೋರದದರಿಂದಲೂ, ಸೂಕ್ಷ್ಮದಿಂದ ಪರಕಿಸಿದ ಹೊರತು ಸ್ವಾಭಾವಿಕವಾಗಿ ನೋಡುವವರಿಗೆ ಮೋಸವು ತಿಳಿಯುವಂತಿದ್ದಿಲ್ಲ. ಇದಲ್ಲದೆ ಮದಲಗಿತ್ತಿಯು ನಾಲ್ಕು ಮಂದಿಯೊಳಗೆ ಬರಬೇಕಾದರೆ ಅರ್ಧಮರ್ಧ ಮೋರೆಯು ಮುಚ್ಚುವಂತೆ ತಲೆಸೆರಗು ಹೊದ್ದುಕೊ

ಳ್ಳುವದು ವಾಡಿಕೆಯುಂಟು. ಈ ವಾಡಿಕೆಯಂತೆ ಮಕರಂದನಾದರೂ ಹೊಲಬನರಿತು ಎಚ್ಚರಿಕೆಯಿಂದ ತನ್ನ ಕೆಲಸವನ್ನು ಕಡೆಗಾಣಿಸಿದನು.

ಆ ದಿನ ಸಂಜೆಯಾದಮೇಲೆ ನಂದನನು ವೇಷಧಾರಿಯಾದ ಮಕರಂದನನ್ನು ಕಂಡು ಮಾಲತಿಯೆಂಬ ನಂಬಿಕೆಯಿಂದ ಕಾಮಾತುರನಾಗಿ, ಮಕರಂದನ ಕಾಲಿಗೆರಗಿ ಮನವೊಲಿಸಹೋಗಲು, ಮಕರಂದನು ಅವನ ಬಿನ್ನಹವನ್ನು ಮನ್ನಿಸಲಿಲ್ಲ; ಆದಕಾರಣ ನಂದನನು ಬಲಾತ್ಕಾರಮಾಡಬೇಕೆಂದು ಕೊಬ್ಬಿನಿಂದ ಮಕರಂದನ ಮೈಮೇಲೆ ಏರಿಹೋಗಹವಣಿಸಲು ಮಕರಂದನು ಸಿಟ್ಟಿನಿಂದ ಅವನನ್ನು ತಳ್ಳಿಬಿಟ್ಟನು. ಈ ಮಾನಖಂಡನದಿಂದುಂಟಾದ ಮುಖಭಂಗದಿಂದಲೂ ರೋಷಾವೇಶದಿಂದಲೂ ಬಾಯಿಂದ ಶಬ್ದಗಳು ಹೊರಡದೆ, ಕೆಂಡದಂತೆ ಕೆಂಪಾದ ಕಣ್ಣುಗಳನ್ನು ತಿರುವುತ್ತ, ಹಲ್ಲುಕಡಿಯುತ್ತ,— ಇಂಥ ಹಾದರಗಿತ್ತಿಯರ ಸಹವಾಸವೇ ನನಗಿನ್ನು ಬೇಡವೆಂದು ಆಣೆಯಮಾಡಿ ಕಾಲುಗಳನ್ನು ಅಪ್ಪಳಿಸುತ್ತ, ನಂದನನು ದಿಗ್ಗನೇ ಮಂದಿರವನ್ನು ಬಿಟ್ಟು ತೆರಳಿಹೋದನು. ಮಕರಂದನಾದರೂ ಈ ಮೇರೆಗೆ ನಂದನನ ಕಣ್ಣಿಗೆ ಇಂಗುಹಚ್ಚಿ ಭೂರಿವಸುವಿನ ಮನೆಯಲ್ಲಿ ಕ್ಷೇಮದಿಂದಿದ್ದನು.

ಆದರೆ ಮಕರಂದನಿಗೆ ಮದಯಂತಿಕೆಯು ದೊರೆಯುವ ಬಗೆ ಯಾವುದು? ಕಾಮಂದಕಿಯು ಮಾಡಿದ ಒಳಸಂಚು ಇಲ್ಲಿಯೇ ಕೊನೆಗಂಡಿತೋ? ಇಲ್ಲ. ಈ ಬಗ್ಗೆ ಕಾಮಂದಕಿಯ ಪಟ್ಟಶಿಷ್ಯಳಾದ ಬುದ್ಧರಕ್ಷಿತೆಯು ಹಂಚಿಕೆಯನ್ನು ಹಾಕುತ್ತಲೇ ಇದ್ದಳು.

ಮರುದಿವಸ ನಸುಕುಹರಿಯುವದರೊಳಗಾಗಿಂದೇ ಮದುಮಗಳ ಮನೆದುಂಬಿಸಿಕೊಳ್ಳುವ ಉತ್ಸವವಿದ್ದುದರಿಂದಲೂ, ಮದುವೆಯಲ್ಲಿಯ ಓಡಾಟದ ದಣುವಿಕೆಯಿಂದಲೂ ನಂದನನ ಮನೆಯಲ್ಲಿ ಎಲ್ಲರು ಗಾಢನಿದ್ರೆಯಲ್ಲಿ ಮಲಗಿದ್ದರು. ಈ ಸಂಧಿಯಲ್ಲಿ ಮದಯಂತಿಕೆಯ ಕಿವಿಯೂದಿ ಅವಳನ್ನು ಹಂಚಿಕೆಯಿಂದ ಭೂರಿವಸುವಿನ ಮಂದಿರಕ್ಕೆ ಕರಕೊಂಡು ಹೋಗಬೇಕೆಂದೆಣಿಸಿ, ಬುದ್ಧರಕ್ಷಿತೆಯು, ನಂದನನಿಗೆ ಮಿಥ್ಯಾಮಾಲತಿಯು ಮಾಡಿದ ಅಪ್ರತಿಷ್ಠೆಯನ್ನು ಮದಯಂತಿಕೆಗರುಹಿದಳು. ತನ್ನಣ್ಣನಿಗಾದ ಇಂಥ ಅವಮಾನದ ಸುದ್ದಿಯ ಕೇಳಿ ಸೈರಿಸದೆ ಮದಯಂತಿಕೆಯು— ಬುದ್ಧರಕ್ಷಿತೇ, ಏನು ನಡತೆಯಿದು? ಮಾಲತಿಯನ್ನು ಒಳಿತಾಗಿ ಸಿಟ್ಟುಮಾಡಿ ಆಕೆಯ ಮೋರೆಯಮೇಲಿನ ನೀರು ಇಳಿಸಿ ಬರುವ ಬಾ — ಎಂದು ಬುದ್ಧರಕ್ಷಿತೆಯ ಕೈಹಿಡಿದು ಅಮಾತ್ಯಮಂದಿರದೆಡೆಗೆ ತಾನೇ ಕರಕೊಂಡು ನಡೆದಳು. “ಕುರುಡನಿಗೇನು ಬೇಕು? ಎರಡು ಕಣ್ಣು” ಎಂಬ ಗಾದೆಯ ಮಾತಿನಂತೆ ಬುದ್ಧರಕ್ಷಿತೆಗಾದರೂ ಇಷ್ಟೇ ಬೇಕಾಗಿತ್ತು. ಏನಾದರೂ ನೆವದಿಂದ ಮದಯಂತಿಕೆಯನ್ನು ಮಕರಂದನಿದ್ದೆಡೆಗೆ ದಿಟವಾಗಿ ಕರಕೊಂಡು ಬರುವೆನೆಂದು ಬುದ್ಧರಕ್ಷಿತೆಯು ಲವಂಗಿಕೆಗೆ ಮೊದಲೇ ಸೂಚಿಸಿದ್ದಳು. ಆ ಮೇರೆಗೆ ಅಮಾತ್ಯಮಂದಿರದಲ್ಲಿ ಲವಂಗಿ

ಕೆಯು ಬುದ್ಧರಕ್ಷಿತೆಯು ಹಾದಿಯನ್ನು ನೋಡುತ್ತ ತನ್ನ ಎಚ್ಚರಿಕೆಯಲ್ಲಿಯೇ ಇದ್ದಳು. ಇಷ್ಟರಲ್ಲಿ ಪ್ರೈಜಣದ ಸಪ್ಪಳವಾಗಲು, ಮುಸುಕುಹಾಕಿಕೊಂಡು ಸಿದ್ಧಳು ಸೋಗಿನಿಂದ ಮಕರಂದನಿಗೆ ಮಲಗಹೇಳಿದಳು. ಕ್ಷಣದಲ್ಲಿ ಬುದ್ಧರಕ್ಷಿತೆಯೊಂದಿಗೆ ಮದಯಂತಿಕೆಯು ನಡುಮನೆಯಲ್ಲಿ ಒಂದು ಮುಸುಕಿನಲ್ಲಿ ಮಲಗಿದ ಮಿಥ್ಯಾಮಾಲತಿಯನ್ನು ನೋಡಿ ಲವಂಗಿಕೆಗೆ— ಗೆಳತೀ, ಮಾಲತಿಯು ಮಲಗಿರುವಳೇನು?— ಎಂದುದಕ್ಕೆ,

ಲವಂಗಿಕೆ— ಬಾ, ಆಕೆಯನ್ನು ಎಬ್ಬಿಸಬೇಡ. ಇಷ್ಟು ಹೊತ್ತಿನತನಕ ದುಗುಡದಲ್ಲಿಯೇ ಇದ್ದಳು. ಈಗೀಗ ತುಸು ಸಮಾಧಾನ ಹೊಂದಿ ಕಣ್ಣಿಗೆಕಣ್ಣು ಹಚ್ಚಿರುವಳು. ಈ ಹಾಸಿಕೆಯ ಮಗ್ಗಲಿನಲ್ಲಿಯೇ ಮೆಲ್ಲನೇ ಕುಳಿತುಕೊ.

ಮದಯಂತಿಕೆ— ( ಕುಳಿತುಕೊಂಡು ) ಹೂಂ! ಈ ಕಟಪಿಗೆ ಸುಮ್ಮನೆ ಇಷ್ಟೇಕೆ ಸೆಡವು?

ಲವಂಗಿಕೆ— ಅಹಹ! ನಿಮ್ಮಣ್ಣನಂಥ ಗಂಡನು ಸಿಕ್ಕಮೇಲೆ ಮತ್ತೇನು ಬೇಕು! ಇಲ್ಲೇ ಸ್ವರ್ಗವು! ಅವನ ಚಲುವಿಕೆಯನ್ನೂ ಚಾತುರ್ಯವನ್ನೂ ಸವಿಮಾತನ್ನೂ ಎಷ್ಟು ಬಣ್ಣಿಸಿದರೂ ತೀರದು! ಹೊಸಮದಲಗಿತ್ತಿಯನ್ನು ಹೇಗೆ ನಡಿಸಿಕೊಳ್ಳಬೇಕೆಂಬದನ್ನು ನಿಮ್ಮ ಅಣ್ಣನಿಂದಲೇ ಕಲಿಯಬೇಕು ನೋಡು!

ಮದಯಂತಿಕೆ—ಕೇಳಿದೆಯೇನೇ ಬುದ್ಧರಕ್ಷಿತೇ, ತಿರುಗಿ ನಮ್ಮನ್ನೇ ಹಳಿಯುವದು!

ಬುದ್ಧರಕ್ಷಿತೆ—( ತುಸು ಅನುಮಾನಿಸಿದಂತೆ ತೋರಿಸಿ )—ಹೂಂ, ಹಾಗೂ ಸರಿ! ಹೀಗೂ ಸರಿ! ನಂದನನು ಕಾಲುಬಿದ್ದು ಬೇಡಿಕೊಂಡರೂ, ನಾಚಿಕೆಯಿಂದ ವಶಳಾಗಲಿಲ್ಲೆಂಬದು ಮಾಲತಿಯ ತಪ್ಪೇ ಸರಿ. ಆದರೂ ಹೊಸ ಮದಲಗಿತ್ತಿಯರಿಗೆ ಸಲ್ಲದ ಉದ್ಧುರುಟತನದಿಂದ ಮೈಮೇಲೆ ಹೋಗಿ ಆಡಬಾರದ ಸಣ್ಣಮಾತು ಆಡಿದುದರಿಂದ ನಿಮ್ಮಣ್ಣನ ತಪ್ಪು ಹೆಚ್ಚಿನದು. ಹೆಣ್ಣು ಜಾತಿಯು ಮಲ್ಲಿಗೆಯ ಹೂವಿನಂತೆ ತೀರ ಮಿದುವು; ಆದಕಾರಣ ಹೆಂಗಸರನ್ನು ಸವಿಸವಿಯಾದ ಮೃದು ನುಡಿಯಿಂದ ಮನವೊಲಿಸಿ ನಂಬಿಗೆಯನ್ನುಂಟು ಮಾಡಿಕೊಳ್ಳುವದೇ ಒಳ್ಳೆಯದು. ಹಾಗೆ ಮಾಡದೆ ಬಲುವೆಯಿಂದ ನಡೆಯ ಹೋದರೆ ಅವರು ತೀರ ಅಡಪೀಬಿದ್ದು ಸುರತದ್ವೇಷಿಗಳಾಗುವರೆಂದು ಕಾಮಸೂತ್ರಕಾರರು ಹೇಳಿರುತ್ತಾರೆ.

ಸ್ವಕಾರ್ಯದಕ್ಷಳಾದ ಬುದ್ಧರಕ್ಷಿತೆಯು ಈ ಮೇರೆಗೆ ಎರಡೂ ದಂಡೆಯ ಮೇಲೆ ಕೈಯಿಟ್ಟು ಮಾತಾಡಿದುದನ್ನು ಕೇಳಿ ಲವಂಗಿಕೆಗೆ ಮತ್ತಿಷ್ಟು ಬೆಂಬಲದೊರೆದು ಕಂಗಳಿಂದ ಸುಳ್ಳೇ ಕಂಬನಿಗಳನ್ನು ಸುರಿಸುತ್ತ:—“ ರಾಜ್ಯದೊಳಗೆಷ್ಟೋ ಮಂದಿ ಕುಲಕನ್ನಿಕೆಯರನ್ನು ಮದುವೆಯಾಗುತ್ತಾರೆ. ಆದರೆ ಹೀಗೆ ಮನೆತನಸ್ಥರಾದ ಅರಿಯದ ಚಿಕ್ಕ ಹುಡಗಿಯರನ್ನು ತಪ್ಪಿಲ್ಲದೆ ಮನಸಿಗೆ ಬಂದಂತೆ ಬೈದು ಉರುವಣಿಸುವದನ್ನು ನಾನೆಲ್ಲಿಯೂ ಕಂಡಿಲ್ಲ.

ಹೆಣ್ಣು ಮಕ್ಕಳನ್ನು ತಿರುಗಿ ಗಂಡನ ಮನೆಗೆ ಕಳುಹಿಸದಂತೆ ಹೇವಹುಟ್ಟಿಸುವ ಆ ಮಾತುಗಳನ್ನು ಸಾಯುವತನಕ ನೆನೆನೆನಿಸಿ, ಬಳಗದವರು ಹೆಣು ಹಡೆದ ತಪ್ಪಿಗಾಗಿ ಕೊರಗಬೇಕು ನೋಡು! ಹೆಣ್ಣು ಮಕ್ಕಳನ್ನು ಬೇಡುವದೇತರಸಲುವಾಗಿ? ಹೀಗೇ ಗೋಳಾಡುವದಕ್ಕಲ್ಲವೋ?"–ಹೀಗೆಂದು ಮೂಗು ಸೇದಿಸೇದಿ ಸೆರಗಿನಿಂದ ತಾನೇ ಕಣ್ಣೊರಿಸಿಕೊಂಡು ಅಳಹತ್ತಿದಳು.

ನಂದನನು ಮಾಲತಿಯ ಮನಸಿಗೆ ಹತ್ತುವಂತೆ ಏನು ಮಾತಾಡಿದನೆಂಬದು ಮದಯಂತಿಕೆಗೆ ಗೊತ್ತಿದ್ದಿಲ್ಲ; ಅದಕ್ಕಾಗಿ ಬುದ್ಧರಕ್ಷಿತೆಯನ್ನು ಕೇಳಲು ಅವಳು ನಂದನನಿಗೂ ಮಕರಂದನಿಗೂ ನಡುವೆ ಆದ ಸಂಗತಿಯನ್ನೆಲ್ಲ ವಿವರಿಸಿ, ಇದನ್ನೆಲ್ಲ ನನ್ನ ಕಿವಿಯಿಂದಲೇ ಕೇಳಿದೆನೆಂದು ಹೇಳಿದಳು. ಆಗ ಮದಯಂತಿಕೆಯು ತುಸು ಮರ್ಯಾದೆವಿಹಿೂನದ ಕೆಲಸವಾಯಿತೆಂದು ಮನಗಂಡು ಕಿವಿಯ ಮೇಲೆ ಕೈಯಿರಿಸಿ—"ಲವಂಗಿಕೇ, ನಮ್ಮಣ್ಣನು ಹಾಗೆಂದುದು ನಿಜವಿದ್ದರೆ ಬಹಳೇ ಕೆಟ್ಟ ಕೆಲಸವಾಯಿತು. ಇನ್ನು ನಿಮಗೆ ನನ್ನ ಮೋರೆಯನ್ನು ಕೂಡ ತೋರಿಸದಂತೆ ದಿಟವಾಗಿ ನನಗಾಗಿರುತ್ತದೆ. ಆದರೂ ಮಾಡುವದೇನು? ನಿರ್ವಾಹವಿಲ್ಲ. ಗಂಡನಾದಮೇಲೆ ಅವನ ಚಿತ್ತವನ್ನನುಸರಿಸಿ ನಡೆಯುವದೇ ಹೆಂಡತಿಯ ಧರ್ಮವು. ಹಾಗೂ ಕಾರಣವಿಲ್ಲದೆ ನಮ್ಮಣ್ಣನು ಅಂಥ ಸಣ್ಣ ಮಾತು ಆಡುವವನಲ್ಲ. ಆ ಮಾಧವನಲ್ಲಿ ಮಾಲತಿಯ ಪ್ರೇಮವು ನೆಲೆಗೊಂಡುದುದನ್ನು ಎಲ್ಲರು ಚನ್ನಾಗಿ ಬಲ್ಲರು. ಈ ಕಾರಣದಿಂದಲೇ ಒಂದು ವೇಳೆ ರೇಗಿಗೆ ಬಂದು ಹಾಗೆ ಕೆಣಕಿ ಮಾತಾಡಿರಬಹುದು. ಆದದ್ದಾಯಿತು; ಇನ್ನು ಮುಂದಾದರೂ ಮಾಲತಿಯು ಮಾಧವನಮೇಲಿನ ಪ್ರೇಮವನ್ನು ಮರೆತು ಬಿಟ್ಟು ಸಲುವಳಿಯಿಂದ ನಡಕೊಳ್ಳುವಂತೆ ನೀವೆಲ್ಲರು ಯತ್ನಿಸತಕ್ಕದ್ದು. ಇಲ್ಲವಾದರೆ ಪರಿಣಾಮವು ಅನರ್ಥವಾದೀತು. ಏಕೆಂದರೆ ಕೆಟ್ಟ ನಡತೆಯ ಗಂಡನುಳ್ಳ ಹೆಂಗಸರು ಎದೆಯಲ್ಲಿ ನಟ್ಟ ಸರಳಿನಂತೆ ಗಂಡಂದಿರ ಮನಸಿಗೆ ಹಗಲಿರಳು ಮುಳುಹು ಆಗುತ್ತಾರೆ. ಈ ಮಾತನ್ನು ಮಾಲತಿಯ ಮನಸಿನಲ್ಲಿ ನೆಟ್ಟಗೆ ಬಿಂಬಿಸಿ ನೀನೇ ಹೇಳಬೇಕು; ಮದಯಂತಿಕೆಯು ಹೀಗೆನ್ನುತ್ತಿದ್ದಳೆಂದು ಮಾತ್ರ ಆಕೆಗೆ ತಿಳಿಸಬೇಡ."

ಲವಂಗಿಕೆ—"ಛೀ! ಅತ್ತ ನಡೆ; ಇಂಥ ಅಸಂಗತ ಮಾತನ್ನು ಇನ್ನೊಮ್ಮೆ ನಾಲಿಗೆಯಿಂದ ಆಡಬೇಡ. ನಿನ್ನ ಸಂಗಡ ನಾನು ಮಾತಾಡುವದಿಲ್ಲ, ಹೋಗು"—ಹೀಗೆಂದು ಮೂಗು ಮುರಿದಳು.

ಮದಯಂತಿಕೆ–ಅಹಹ! ಇದು ಯಾರಿಗೂ ಅರಿಯದ ಸುದ್ದಿಯಲ್ಲ. ಸುಮ್ಮನೇಕೆ ಬಡಿವಾರ ಮಾಡುತ್ತೀ? ಮಾಧವನಿಗಾಗಿ ಮಾಲತಿಯು ತನ್ನ ಪ್ರಾಣವನ್ನು ಸಹ ಕೊಡುವಳೆಂದು ನೀನೂ ಬಲ್ಲೆ, ನಾನೂ ಬಲ್ಲೆನು. ಇದಕ್ಕೂ ಒಡೆದು ಹೇಳುವದೇನು! ಕೇದಗಿ ಹೂವಿನಂತೆ ಅವಯವಗಳು ಬಿಳುಪೇರಿದ್ದರೂ ತನ್ನ ಬೆಡಗಿನಿಂದೊಪ್ಪುವ ಮಾಲತಿಯನ್ನೂ, ನಸಕಿನ ಬೆಳಕಿನಿಂದ ಬಾಡಿದ ಚಂದ್ರ

ನಂತೆಸೆವ ಮಾಧವನನ್ನೂ, ನೋಡಿ ಯಾರು ಮೋಸಹೋದಾರು? ಮಾಲತಿಯ ಜೀವವಂತೂ ಮಾಧವನು ತನ್ನ ಕೈಯಿಂದ ಕಟ್ಟಿದ ಬಕುಳಹಾರದ ಮೇಲೇ ಇರುತ್ತದೆ. ಹಾಗೂ ಆ ದಿನ ಕುಸುಮಾಕರವೆಂಬ ತೋಟದ ಬದಿಯ ಬೀದಿಯಲ್ಲಿ ನಾವೆಲ್ಲರು ನಿಂತಿರಲು, ಕಾಮಚೇಷ್ಟೆಯಿಂದುಂಟಾದ ಅವರೀರ್ವರ ಕಡೆಗಣ್ಣನೋಟದ ವಿಲಾಸವನ್ನು ನೀನು ನೋಡಲಿಲ್ಲವೇನು! ಮತ್ತು ಅರಸರು ಬಂದು ನಮ್ಮ ಅಣ್ಣನಿಗೆ ಮಾಲತೀಪ್ರದಾನ ಮಾಡಿ ಹೋದರೆಂಬ ಸುದ್ದಿಯನ್ನು ಕೇಳಿದ ಕ್ಷಣವೇ ಅವರೆದೆಯೊಡೆದು ನೀರಾಗಿ ಮೋರೆಯು ಕಪ್ಪೇರಿದುದನ್ನಾದರೂ ನೀನು ಕಂಡಿದ್ದೆಯಲ್ಲ! ನೆನಪು ಮಾಡಿಕೊಂಡ ಹಾಗೆಲ್ಲ ಹೊಸಹೊಸ ಮಾತುಗಳೇ ಬಯಲಿಗೆ ಬರುತ್ತವೆ. ಆ ದಿವಸ ನನ್ನ ಜೀವದಾನ ಕೊಟ್ಟ ಆ ಮಹಾರಾಯನು ಮುರ್ಛೆ ತಿಳಿದೆದ್ದುದಕ್ಕೆ ಕಾಮಂದಕಿಯು ಮಾಲತಿಯ ಪಕ್ಷದಿಂದ ಮಾಧವನನ್ನಭಿನಂದಿಸಲು, ಮಾಧವನು ತನ್ನ ಸರ್ವಸ್ವವನ್ನೆಲ್ಲ ಮಾಲತಿಗೆ ಒಪ್ಪಿಸಿರುತ್ತೇನೆಂದು ನುಡಿದುದನ್ನು ನೀನು ಕೇಳಲಿಲ್ಲವೇನು?

ಇದನ್ನು ಕೇಳಿ ಲವಂಗಿಕೆಯು ಆ ಮಹಾರಾಯನಾರೆಂಬದನ್ನು ತಿಳುಕೊಂಡಿದ್ದರೂ ಮದಯಂತಿಕೆಯ ಬಾಯಿಂದ ಅವನ ಹೆಸರನ್ನು ಹೊರಡಿಸಬೇಕೆಂಬ ಲವಲವಿಕೆಯಿಂದ ತಲೆಯಮೇಲೆ ಕೈಯಿಟ್ಟು ತುಸು ದೇನಿಸಿದಂತೆ ತೋರಿಸಿ—" ಆ ಮಹಾರಾಯನಾರಾಗಿರಬಹುದು! ಒಳ್ಳೇದು! ಮರೆತುಬಿಟ್ಟೆನು"—ಎಂದು ಕೊಂಕಿನಿಂದ ಅಂದುದಕ್ಕೆ—

ಮದಯಂತಿಕೆ—ಗೆಳತೀ, ಚನ್ನಾಗಿ ನೆನಪು ಮಾಡಿಕೋ. ಆ ದಿನ ಹುಲಿಯೆಂಬ ಸಾವಿನ ಬಾಯೊಳಗೆ ನಾನು ಬೀಳುತ್ತಿರಲು, ತನ್ನ ಬೆಲೆಯುಳ್ಳ ಜೀವದ ಹಂಗುದೊರೆದು, ನನ್ನ ಗುರುತಿಲ್ಲದೆ ಕೇವಲ ಪರೋಪಕಾರದಭಿಮಾನದಿಂದ, ನನ್ನ ಸಲುವಾಗಿ ಘೋರವಾದ ಸಾಹಸವನ್ನು ಮಾಡಿ ತನ್ನ ಭುಜಬಲದಿಂದ ಅನಾಥಳಾದ ನನ್ನನ್ನು ಬದುಕಿಸಿಕೊಳ್ಳಲಿಕ್ಕೆ ಒಳ್ಳೇ ಸಮಯದಲ್ಲೊದಗಿ ಬಂದನು. ಹಾಗೂ ಆ ದುಷ್ಟಹುಲಿಯು ಹರಿತಾದ ಪಂಜರದುಗುರಿನ ಪೆಟ್ಟು ತಿಂದರೂ ಎದೆಯಲ್ಲಿ ಮೊನೆಯಾದ ಹಲ್ಲುಗಳಿಂದ ನೆಡಿಸಿಕೊಂಡರೂ ಸ್ವಲ್ಪಾದರೂ ಎದೆಗುಂದದೆ, ಕೇವಲ ನನ್ನಮೇಲೆ ಕನಿಕರಬಟ್ಟು, ಗಾಯಗಳನ್ನೆಲ್ಲ ತಡಕೊಂಡು ಆ ಕ್ರೂರವಾದ ಪಶುವನ್ನು ಕೊಂದು ಹಾಕಿದನು. ಇನ್ನಾದರೂ ಅವನಾರೆಂಬದು ತಿಳಿದೆಯಾ?

ಲವಂಗಿಕೆ—(ನೆನಪಾದಂತೆ ತೋರಿಸಿ)—" ಹೂಂ. ಹುಂ. ಅಹುದು, ಅವನು ಮಕರಂದನಲ್ಲವೇ"—ಎಂದು ನುಡಿಯಲು, ತನ್ನ ನಲ್ಲನ ಹೆಸರು ಕಿವಿಯಲ್ಲಿ ಬಿದ್ದ ಕೂಡಲೇ ಆನಂದದಿಂದ ಮೈಯುಬ್ಬಿ ಮದಯಂತಿಕೆಯು—"ಲವಂಗಿಕೇ, ಏನೇನಂದೆ? ಇನ್ನೊಮ್ಮೆ ನುಡಿ"—ಎಂದು ಉತಾವಳಿಯನ್ನು ತೋರಿಸಲು, ಲವಂಗಿಕೆಯು ಮದಯಂತಿಕೆಯ ಮೈಮೇಲೆ ಕೈಯೆಳೆದು ಮುಗುಳನಗೆಯಿಂದ—" ಅಹುದು, ಮಕರಂದ

ನೆಂದೆನು. ಆದರೆ ಇಷ್ಟೇಕೆ ಹಾತೊರೆಯುವೆ ! ಮಾಲತಿಯು ಅಂಥವಳು ಇಂಥ ವಳು ಎಂದು ಅನ್ನಲಿಕ್ಕೆ ಮಾತ್ರ ನಿನಗೆ ಬಾಯಿಯುಂಟ.; ನಾವು ಹೇಗೇ ಇರಲಿ ಹೆರವರಿಗೆ ನೀರು ತಿದ್ದುವ ನಿಮ್ಮಂಥ ಸಂಭಾವಿತ ಕುಲಕನ್ನಿಕೆಯರ ಹಾಡು ಹೀಗೇಕೆ? ಒಮ್ಮಿಂನೊಮ್ಮೆ ಮಾತು ಮಾತಾಡುವದರೊಳಗೇ ನಿನ್ನ ಶರೀರವು ಹೀಗೇಕೆ ಮುಳ್ಳಿಟ್ಟಿತು?

ಮದಯಂತಿಕೆ (ನಾಚಿಕೆಯಿಂದ)— ಲವಂಗಿಕೇ, ಸುಮ್ಮನೇ ನನ್ನ ನಗೆಗೇಡು ಮಾಡಬೇಡ. ನಾನಾಡುವದೊಂದು, ನೀನು ತಿಳಕೊಳ್ಳುವದೊಂದು. ತಮ್ಮ ಪ್ರಾಣವನ್ನು ಕೂಡ ಲೆಕ್ಕಿಸದೆ ಕೇವಲ ಪರರಿಗೆ ಉಪಕಾರ ಮಾಡಬೇಕೆಂದು ಅವರನ್ನು ಮೃತ್ಯುವಿನ ಬಾಯಿಂದ ಬಿಡಿಸಿಕೊಳ್ಳುವಂಥ ಮಹಾ ಪುರುಷರ ಹೆಸರು ತೆಗೆದುಕೊಂಡರೆ ಮನಸಿಗೆ ತುಸು ಹಾಯಿಯೆನಿಸುತ್ತದೆ; ಮತ್ತೇನಿಲ್ಲ. ಗಾಯದ ನೋವಿನಿಂದ ಮೈ ಮರೆತು, ಮೈತುಂಬ ಬೆವರಿ, ಮಬ್ಬಿನಿಂದ ಅರೆಗಣ್ಣು ಮುಚ್ಚಿ ತನ್ನ ಖಡ್ಗವನ್ನು ನೆಲದಲ್ಲಿ ಊರಿ ಆತುಕೊಂಡು ನಿಂತಿದ್ದ ಆ ಮಹಾಪುರುಷ ನನ್ನು ನೀನು ಕಣ್ಣುಮುಟ್ಟ ನೋಡಿರುವೆಯಲ್ಲ? ಕಾರಣವಿಲ್ಲದೆ ಈಗಿನ ಕಾಲದಲ್ಲಿ ಇಷ್ಟು ಮಾಡುವವರಾರು? ನೀನೇ ತಿಳಿದು ಹೇಳು.

ಮದಯಂತಿಕೆಯು ಹೀಗೆ ಮಾತನಾಡುವಾಗ ಅವಳ ಮೈಮೇಲೆ ಬೆವರ ಹನಿ ಗಳು ಹರಿಯಹತ್ತಿದವು; ರೋಮಾಂಚಗಳೆದ್ದವು. ಇದನ್ನು ಕಂಡು, ಲವಂಗಿ ಕೆಯು— ನಿನ್ನ ಮನೋಭಾವವೆಲ್ಲ ನಿನ್ನ ಮೈಮೇಲೆ ಒಡೆದಿರುತ್ತದೆ. ನಿನ್ನ ಒಳಗಿನ ಗೆರೆಯನ್ನೆಲ್ಲ ಬಲ್ಲೆವು! ಬಡಿವಾರಗಿತ್ತೀ, ಇಲ್ಲದ ನೆವದಿಂದ ಮುಚ್ಚು ತ್ತಿಯೇಕೆ? ಇನ್ನು ಸಾಕುಮಾಡು. ನಿಜವಿದ್ದುದನ್ನೆಲ್ಲ ಹೇಳಿಬಿಡು. ನಮ್ಮ ಮುಂದೇತರ ನಾಚಿಕೆ?— ಎನಲು ಬುದ್ಧರಕ್ಷಿತೆಯಾದರೂ ತನ್ನ ತಲೆಯನ್ನಲಾ ಡಿಸಿ ಇದಕ್ಕೊಪ್ಪಿಗೆಯನ್ನು ಕೊಟ್ಟಳು. ಮದಯಂತಿಕೆಯು ತನ್ನ ಆಟಸಾಗ ದಂತಾದುದನ್ನರಿತು ಉಪಾಯವಿಲ್ಲದೆ ತನ್ನ ಇಂಗಿತವನ್ನೆಲ್ಲ ಹೇಳ ತೊಡಗಿದಳೇ ನಂದರೆ:— “ ಗೆಳತೀ, ಕಿವಿಗೊಟ್ಟು ಕೇಳು, ಮಟ್ಟಮೊದಲು ನನಗಾವುದೂ ಗೊತ್ತಿದ್ದಿಲ್ಲ. ಬುದ್ಧರಕ್ಷಿತೆಯ ಕೇವಲ ನಂಬಿಗೆಯ ಹೇಳಿಕೆಯ ಮೇಲಿಂದಲೇ ಆ ಪುರುಷನಲ್ಲಿ ನನ್ನ ಪ್ರೀತಿಯು ನೆಲೆಗೊಂಡು ತೀರ ಹೆಚ್ಚಾಯಿತು. ಹಾಗೂ ಅವ ನನ್ನು ಒಮ್ಮೆ ನೋಡಬೇಕೆಂಬ ಮನಸಿನ ಕುತೂಹಲವು ಉಕ್ಕಿ ಸೂಸಹತ್ತಿತು. ಆಮೇಲೆ ದೈವಯೋಗದಿಂದ ಅವನ ದರುಶನವಾಗಲು, ದುಃಸಹ ಮದನಬಾಧೆ ಯಿಂದ ಪೀಡಿತಳಾದ ನನ್ನ ಜೀವವು ತಳಮಳಿಸಹತ್ತಿ ಶರೀರದಿಂದ ತೊಲಗಿಹೋ ಗುತ್ತದೋ ಏನೋ ಎಂಬಂತಾಯಿತು. ಹುಟ್ಟಾ ಅರಿಯದ ಕಾಮತಾಪದುರಿ ಯಿಂದ ಮೈಯೆಲ್ಲ ಬೆಂಕಿ ಹತ್ತಿದಂತಾಗಿ ತಾಳಲಾರದೆ, ಪ್ರಾಣನನ್ನಾನರೂ

ತೊರೆದು ಮುಕ್ತಳಾಗಬೇಕೆಂದರೆ ಬುದ್ಧರಕ್ಷಿತೆಯು ಸುಮ್ಮನಿರುವವಳೇ? ಏನಾದ
ರೊಂದು ಎಡೆತಡೆಯನ್ನು ಹೇಳಿ ಮನಸಿನ ದುಮ್ಮಳವನ್ನು ಮತ್ತಿಷ್ಟು ಹೆಚ್ಚಿಸು
ತ್ತಿದ್ದಳು. ಈ ಪರಿಯಿಂದ ಗೆಳತಿಯರಿಗೂ ಬೇಸರಕೊಟ್ಟು ನಾನೂ ಬೇಸತ್ತು
ಬಲು ಕಷ್ಟದಿಂದ ಹೊತ್ತುಗಳೆಯುತ್ತೇನೆ, ನೋಡು! ಹಗಲಿರಳು ನನಗೆ ಆ
ಮಹಾರಾಯನ ಹಳವಂಡವೇ ಹತ್ತಿರುವದರಿಂದ ನನ್ನ ಕನಸಿನಲ್ಲಿ ಸಹ ಬಂದು,
ಉನ್ಮತ್ತನಂತೆ ತನ್ನವಿಶಾಲವಾದ ಅರೆಗಣ್ಣುಗಳನ್ನು ಬಿರಿಬಿರಿ ತಿರವುತ್ತ ನನ್ನೆದು
ರಿನಲ್ಲಿ ನಿಂತಂತೆ ನನಗೆ ಮೋಸವಾಗುತ್ತದೆ. ಹಾಗೂ ಕಮಲದೆಸಳುಗಳನ್ನು ತಿಂದ
ಕಲಹಂಸದಂತೆ ಗಂಭೀರವಾದ ಧ್ವನಿಯಿಂದ—ಪ್ರಿಯೇ, ಮದಯಂತಿಕೇ—ಎಂದು
ನನ್ನನ್ನು ಹೆಸರುಗೊಂಡು ಕರೆದ ತೊದಲ್ನುಡಿಯ ನಾದವು ಇನ್ನೂ ನನ್ನ ಕಿವಿ
ಯಲ್ಲಿ ತುಂಬಿರುತ್ತದೆ. ಮತ್ತೂ ನನ್ನ ಹಾರುವ ಎದೆಯಿಂದ ಜಾರಿಬಿದ್ದ ಸೆರಗನ್ನು
ಹಿಡಿದೆಳೆದು, ಮುಂದೆ ಸರಿದು ತನ್ನ ಕಠೋರವಾದ ಬಾಹುಗಳಿಂದ ಬಿಗಿದಪ್ಪಲು
ನನ್ನ ಟೊಂಕಕ್ಕೆ ಕಟ್ಟಿದ ಡಾಬು ಸಡಿಲಾಗಿ ಬೀಳಹತ್ತಿದುದರಿಂದ ನಾಚಿ
ಕೊಂಡು ತಪ್ಪಿಸಿ ಹೋಗಬೇಕೆಂದರೆ, ಗಡುತರವಾದ ತೊಡೆಗಳವರೆಗೆ ಜರಿದುಬಂದು
ಮತ್ತಿಷ್ಟು ಹೋಗಗೊಡದಂತೆ ಮಾಡಿತು. ಆ ಮೇಲೆ ನಾನು ತುಸು ಸಿಟ್ಟಿನಿಂದ
ಅವನನ್ನು ನೂಕ ಹೋಗಲು, ಕಲ್ಲಿನಂಥ ರಟ್ಟೆಗಳಿಂದಲೂ ಹರವಾದ ಎದೆ
ಯಿಂದಲೂ ಇಮ್ಮಡಿಯಾಗಿ ಬಿಗಿದು, ತುರುಬು ಹಿಡಿದು, ಮೋರೆಯನ್ನು ಎತ್ತಿ ತ
ತ್ತಿರುವದಂತೆ ಮುದ್ದು ಮಾಡಿ, ಎಡಕೆನ್ನೆಯ ಮೇಲೆ ಕೆಂದುಟಿಯನ್ನಿರಿಸಿ,
ಏನೋ ಅವಿನಯದ ಕೆಲಸ ಮಾಡಬೇಕೆಂದು ಹವಣಿಸಿ, ಕೇಳಬಾರದ ಮಾತು
ಕೇಳಲು, ನಾನು ಭಯದಿಂದಲೂ ನಾಚಿಕೆಯಿಂದಲೂ ಮೊದಲು ಬೆದರಿದರೂ
ಹಿಂದುಗಡೆ ನನಗೆ ಒಂದು ಬಗೆಯ ಪರಮಾಲ್ಹಾದವಾಗಿ ಅದನ್ನು ತಿರುಗಿ ಬಯ
ಸುವಂತೆ ನನಗೆ ಬುದ್ಧಿ ಹುಟ್ಟಿತು. ಗೆಳತೀ, ಇದನ್ನೆಲ್ಲ ಪ್ರತ್ಯಕ್ಷ ಉಪಭೋ
ಗಿಸಿ ಬಳಿಕ ಎಚ್ಚರಾಗಿ ಕಣ್ಣು ತೆರೆದು ನೋಡಲು ಎಲ್ಲ ಮಟ್ಟಮಾಯವಾಗಿ
ಕಟ್ಟಡವಿಯಲ್ಲಿ ಕಣ್ಣು ಕಟ್ಟಿ ಬಿಟ್ಟಂತೆ ನನ್ನ ಪಾಡಾಯಿತು.—"



ಹೀಗೆಂದು ನಿಟ್ಟುಸಿರು ಬಿಟ್ಟು ಎಡಗೈ ಮೇಲೆ ತಲೆಯನ್ನೋರೆಯಾಗಾನಿಸಿ
ಚಿಂತಾತುರಳಂತೆ ಮದಯಂತಿಕೆಯು ಕುಳಿತಳು. ಇದನ್ನು ನೋಡಿ ಬುದ್ಧರಕ್ಷಿ
ತೆಯು—"ಮದಯಂತಿಕೇ, ಇಷ್ಟೇಕೆ ಚಿಂತಿಸುವಿ? ನಿನಗೊಂದು ಗುಟ್ಟಿನ
ಮಾತು ಹೇಳಬೇಕೆಂದೆನಿಸಿದ್ದೇನೆ. ಆದರೆ ನೀನು ನನ್ನ ಕೈಮೇಲೆ ಕೈಯಿಟ್ಟು,
ನಂಬುಗೆಯನ್ನು ಕೊಟ್ಟರೆ ಹೇಳುವೆನು"—ಎನಲು ಮದಯಂತಿಕೆಯು—"ನನ್ನ
ಮೇಲೆ ಇಷ್ಟು ನಂಬುಗೆಯಿಲ್ಲವೆ? ಎಷ್ಟಾದರೂ ನೀನೂ ಲವಂಗಿಕೆಯೂ ನನ್ನ
ಜೀವದ ಗೆಳತಿಯರು. ನಿಮ್ಮ ಹೊರ್ತು ನನಗೆ ಗತಿಯಿಲ್ಲ"

ಬುದ್ಧ:—ಹಾಗಾದರೆ ಮಕರಂದನು ಅಪ್ಪಿತಪ್ಪಿ ನಿನಗೆ ತಿರುಗಿ ಬೆಟ್ಟಿಯಾದರೆ ಏನು ಮಾಡುವೆ? ಹೇಳು.

ಮದ:—ಮತ್ತೇನು ಮಾಡುವದು? ಅವನ ಸರ್ವಾಂಗವನ್ನೆಲ್ಲ ನೆಟ್ಟಗೆ ಕಣ್ಣು ತುಂಬಾ ದಿಟ್ಟಿಸಿ ನೋಡಿ ಸಮಾಧಾನ ಪಡುವೆನು!

ಬುದ್ಧ:—ಶ್ರೀಕೃಷ್ಣನು ಮಾರಜನನಿಯಾದ ರುಕ್ಮಿಣಿಯನ್ನು ಸ್ವಯಂವರದಿಂದ ಮದುವೆ ಮಾಡಿಕೊಂಡಂತೆ. ಮಕರಂದನಾದರೂ ಬಲಾತ್ಕಾರದಿಂದ ಮಾರಜನನಿಯಾದ ನಿನ್ನನ್ನು ಸಾಹಸಮಾಡಿ ಕೈಹಿಡಿದರೆ ಮುಂದೇನು ಮಾಡುವಿ?

ಮದಯಂತಿಕೆಯು ಮಕರಂದನಲ್ಲಿ ಪೂರಾ ಮನಸೋತಿದ್ದಳು. ಮಕರಂದನು ಬಂದು ಅವಳನ್ನು ಬಲಾತ್ಕಾರದಿಂದ ಪರಿಗ್ರಹ ಮಾಡಿಕೊಂಡಿದ್ದರೂ ಅವಳಿಗೆ ಒಲ್ಲೆನ್ನುವ ಎದೆಯಾಗುತ್ತಿದ್ದಿಲ್ಲ; ಆದರೆ ಹೀಗೆ ಆದೀತೆಂದು ಅವಳಿಗೆ ಎಷ್ಟು ಮಟಿಗೂ ತಿಳಿದಿದ್ದಿಲ್ಲ. ಮಕರಂದನು ತನಗೆ ಸುಲಭವಾಗಿ ದೊರೆಯುವದೇ ಕಷ್ಟವೆಂದು ನೆನಿಸಿದ್ದಳು. ಆದುದರಿಂದ ಬುದ್ಧರಕ್ಷಿತೆಯ ಮಾತು ಕೇಳಿ ಅವಿಶ್ವಾಸದಿಂದ ಉಸುರುಗರೆದು—ನನ್ನ ಹಣೇಬರಹದಲ್ಲಿ ಇಷ್ಟೆಲ್ಲಿರುವದು? ಆ ಮಹಾರಾಯನು ನನ್ನ ಸಲುವಾಗಿ ತನ್ನ ಪ್ರಾಣವನ್ನು ಎರವಿಟ್ಟು ನನಗೆ ಹೊಣೆಯಾಗಿ ಹುಲಿಯಿಂದ ರಕ್ಷಿಸಿದನು; ಆದ ಕಾರಣ ನನ್ನ ಶರೀರದ ಮೇಲಿನ ಸ್ವಾಮಿತ್ವವೆಲ್ಲ ಅವನದೇ ಇರುತ್ತದೆ. ಒಲ್ಲೆಂದೆನ್ನಲಿಕ್ಕೆ ನಾನಾರು?—ಎಂದಳು.

ಇಷ್ಟು ಒಡಂಬಟ್ಟಮೇಲೆ ಮತ್ತೇನುಬೇಕು! ಕಾಮಂದಕಿಯ ಹಂಚಿಕೆಯು ಮೂರುಪಾಲು ಕೈಗೂಡಿದಂತೇ ಆಯಿತು. ಏನೂ ಹೊಟ್ಟೆಯಲ್ಲಿಟ್ಟುಕೊಳ್ಳದೆ ಸರಳ ಮನಸಿನಿಂದ ಮದಯಂತಿಕೆಯು ಯಾವತ್ತು ಹೇಳಿಬಿಟ್ಟಳೆಂದು ಲವಂಗಿಕೆಯು ಅವಳ ನಿಷ್ಕಪಟತನವನ್ನು ಕೊಂಡಾಡಿದಳು. ಆದರೂ—ಯಾರಿಗೆ ಗೊತ್ತು? ಒನ್ಮೆ ನಾಲಿಗೆಯಿಂದ ಆಡಿದ ಮಾತು ಹಿಂದುಗಡೆ ನೆನಪಾಗಲಿಕ್ಕಿಲ್ಲೆಂದೆಣಿಸಿ ಬುದ್ಧರಕ್ಷಿತೆಯು ಮೊದಲು ಮದಯಂತಿಕೆಗೆ ಆ ಮಾತಿನ ನೆನಪುಕೊಟ್ಟು, ಬಳಿಕ ಮಾಲತಿಯು ಸೋಗಿನಿಂದ ಮಲಗಿದ ಮಕರಂದನನ್ನು ಎಬ್ಬಿಸಿ ತನ್ನ ಕಾರ್ಯವನ್ನು ಜರಗಿಸುವ ಹಂಚಿಕೆಯಲ್ಲಿದ್ದಳು. ಇಷ್ಟರಲ್ಲಿ ನಡುರಾತ್ರಿಯನ್ನು ಸೂಚಿಸುವ ನಗಾರಿಯು ಸಪ್ಪಳವಾಗಲು ಮದಯಂತಿಕೆಯು,—ತೀರ ಹೊತ್ತಾಯಿತು—ಎಂದು ಚಟ್ಟನೆ ಎದ್ದು, "ಅಣ್ಣನನ್ನು ಒಳಿತಾಗಿ ಸಿಟ್ಟುಮಾಡಿ, ಮಾಲತಿಯು ಕಾಲು ಬೀಳಿಸಿ ಅವಳನ್ನೊಲಿಸಿಕೊಳ್ಳುವಂತೆ ಮಾಡುವೆನು. ಏನೂ ಚಿಂತಿಸಬೇಡ" ಎಂದು ಲವಂಗಿಕೆಗೆ ಹೇಳಿ ತಾನೂ ಹೊರಟು ಹೋಗುವವಳು; ಇಷ್ಟರಲ್ಲಿ ಮಕರಂದನು ಮುಸುಕು ತೆಗೆದು ಮದಯಂತಿಕೆಯ ಕೈಹಿಡಿದು ಜಗ್ಗಿದನು. "ಮಾಲತೀ, ಎದ್ದೆಯಾ?"—ಎಂದು ಮದಯಂತಿಕೆಯು ಬಾಯಿಬಿಚ್ಚಿ ನುಡಿಯುವಷ್ಟರಲ್ಲಿ ಮಕರಂದನ ರೂಪವನ್ನು ಕಂಡು, ಭಯದಿಂದಲೂ ಹರುಷದಿಂದಲೂ ಯುಕ್ತವಾದ ಮುಖಮುದ್ರೆಯಿಂದ ಬೊಟ್ಟು ಕಚ್ಚಿ—ಅಪ್ಪಯ್ಯಾ, ಇದೇನೋ ಫಜೀತಿ ಬಂತು—ಎಂದು ಕೊಸರಿಕೊಂಡು ಹಿಂದೆ ಸರಿ

ಯ ಹೋದಳು. ಆದರೆ ಇದುವರೆಗೆ ತನ್ನ ಪ್ರೀತಿಯ ಕಥೆಯನ್ನೇ ಮುಸುಕಿನಲ್ಲಿ ಕಿವಿಗೊಟ್ಟು ಕೇಳಿ ಮಕರಂದನು ಈಗ ಸುಮ್ಮನೇ ಬಿಡುವವನೇ? ಮದಯಂತಿಕೆಯನ್ನು ಮತ್ತಿಷ್ಟು ಮುಂದಕ್ಕೆಳಕೊಂಡು ಅವಳ ನಾಚಿದ ಮೋರೆಯನ್ನು ಮೇಲಕ್ಕೆತ್ತಿ—' ನುಣ್ಣೊಡೆಯ ಚೆಲುವಿಯೇ, ಇನ್ನೇತಕ್ಕೆ ಭಯಪಡುವೆ? ಮನಸಿನ ಸಂಕೋಚವನ್ನು ಬಿಟ್ಟುಬಿಡು. ನೋಡಿದೆಯಾ? ನಿನ್ನ ಸಣ್ಣ ನಡುವು ಹಾರುವ ತಿಣ್ಣಮೊಲೆಯ ಭಾರವನ್ನು ತಾಳಲಾರದೆ ಹೇಗೆ ಬಳಕುತ್ತದೆ? ನೀನೇ ಎಲ್ಲರ ಮುಂದೆ ನನ್ನ ಮೇಲಿನ ನಿಜವಾದ ಪ್ರೇಮವನ್ನೆಲ್ಲ ಈಗ ಪ್ರಕಟವಾಗಿ ಹೇಳಿದೆ; ನಿನಗೆ ಬೇಕಾದ ಸೇವೆಯನ್ನು ಮಾಡುವ ದಾಸನಾದ ನಾನೂ ಇಲ್ಲೇ ಸಿದ್ಧನಿದ್ದೇನೆ. ಈ ಅಮಾತ್ಯಮಂದಿರದಲ್ಲಾದರೂ ಯಾವತ್ತರು ನಿದ್ದೆಯ ಮಬ್ಬಿನಲ್ಲಿರುವರು. ಹೊರಗೆ ಕತ್ತಲೆಯಂತೂ ದಟ್ಟವಾಗಿ ಬಿದ್ದಿರುವದು; ಆದಕಾರಣ ಈ ನಟ್ಟಿರುಳಿನಲ್ಲಿ ನಮ್ಮನ್ನಾರೂ ನೋಡರು. ನಿನಗೆ ನಾನು ಮಾಡಿದ ಮಹದುಪಕಾರಕ್ಕೆ ಪ್ರತಿಕಾರ ಮಾಡುವದು ಸರಿದೋರಿದರೆ, ನಿನ್ನ ಪೈಜಣದ ಗೆಜ್ಜೆಗಳನ್ನು ಮೇಲಕ್ಕೆ ಬಿಗಿದು ಹಿಡಿದು ಸದ್ದು ಮಾಡದಂತೆ ಮೆಲ್ಲನೆ ನನ್ನೊಡನೆ ನಡೆ"—ಎಂದೆನಲು ಮದಯಂತಿಕೆಯು ಕೈಕಟ್ಟಿದಂತಾಗಿ ಉಪಾಯಾಂತರವನ್ನು ಕಾಣದೆ ಬುದ್ಧರಕ್ಷಿತೆಯನ್ನು ಕುರಿತು:— ಬುದ್ಧರಕ್ಷಿತೇ, ನಾವು ಇನ್ನೆಲ್ಲಿ ಹೋಗುವದು?—ಎಂದು ಕೇಳಿದಳು. ಅದಕ್ಕೆ ಬುದ್ಧರಕ್ಷಿತೆಯು— "ಮಾಲತಿಯಿರುವಲ್ಲಿಗೆ"—ಎಂದು ಉತ್ತರ ಕೊಡಲು, ಆಪ್ತೇಷ್ಟರ ಒಪ್ಪಿಗೆಯಿಲ್ಲದೆ ಮಾಲತಿಯು ಮಾಡಿದ ಸಾಹಸವನ್ನರಿತುಕೊಂಡು, ಮದಯಂತಿಕೆಯು ಬೆರಗಾಗಿ—ತಾನೂ ಹಾಗೇ ಮಾಡಬೇಕಾಯಿತಲ್ಲ! ಎಂದು ಹಳಹಳಿಯಿಂದ ಕಂಬನಿಗಳನ್ನುದುರಿಸಿದಳು. ಬಳಿಕ ಬುದ್ಧರಕ್ಷಿತೆಯು ಮಕರಂದನಿಗೆ—ಮಹಾರಾಯನೇ, ಮದಯಂತಿಕೆಯು ಪ್ರೀತಿಯಿಂದ ತನ್ನ ದೇಹವನ್ನು ನಿನಗೆ ಅರ್ಪಣ ಮಾಡಿರುತ್ತಾಳೆ. ಸ್ವೀಕರಿಸು.—ಎಂದು ನುಡಿಯಲು, ಮಕರಂದನು ಹರುಷದಿಂದ ಮದಯಂತಿಕೆಯ ಕರಗ್ರಹಣ ಮಾಡಿದನು. ಮಕರಧ್ವಜನಾದ ಮದನನು ಮಕರಂದನಿಗೆ ಇಷ್ಟಮಿತ್ರ ಭಾವದಿಂದ ನೆರವಾಗಿ ಮದಯಂತಿಕೆಯನ್ನು ದೊರಕಿಸಿಕೊಟ್ಟುದುದರಿಂದ ಈವೊತ್ತು ಮಕರಂದನು ಪೂರಾ ಗೆದ್ದಂತಾಯಿತು; ಅವನ ತಾರುಣ್ಯವು ಸಫಲವಾಯಿತು. ಅವನ ಉತ್ಸಾಹಕ್ಕೆ ನೆಲೆಯಿಲ್ಲದೆ ಹೋಯಿತು. ಕಾಮಂದಕಿಯು ರಚಿಸಿದ ವ್ಯೂಹವು ತೊಂದರೆಯಿಲ್ಲದೆ ಕಡೆಗಾಣಿಸಿತೆಂದು, ಲವಂಗಿಕೆ ಬುದ್ಧರಕ್ಷಿತೆಯರು ಆನಂದದಲ್ಲಿ ಲೋಲಾಡುತ್ತ, ಮಕರಂದಮದಯಂತಿಕೆಯರೊಂದಿಗೆ ದಿಡ್ಡಿಯ ಬಾಗಿಲದಿಂದ ಮೆಲ್ಲನೆ ಹೊರಬಿದ್ದರು. ನಡುರಾತ್ರಿಯು ಮೀರಿ ಹೋದುದರಿಂದ ರಾಜಬೀದಿಯಲ್ಲಿ ಕೂಡ ಮಂದಿಯ ಸುಳಿದಾಟವು ಅಡಗಿ ಎಲ್ಲ ಕಡೆಯಲ್ಲಿ ನಿಃಶಬ್ದವಾಗಿತ್ತು. ನಟ್ಟಿರುಳಿನ ತಣ್ಣನ್ನ ಗಾಳಿಯು ಉಪ್ಪರಿಗೆಗಳ ಕಿಟಕಿಗಳೊಳಗೆಲ್ಲ ಸುಳಿದಾಡಿ, ಚಂದನ ಪುನಗು ಕತ್ತೂರಿ ಪಚ್ಚ ಕಪ್ಪುರ, ಮುಂತಾದ ಪರಿಮಳವನ್ನು ಸುಲಿಗೆ ಮಾಡಿ, ಓಣಿಗಳಲ್ಲೆಲ್ಲ ಮಂದವಾಗಿ ಬೀಸಲೆಸಗಿದುದರಿಂದ, ರಾಜಬೀದಿಯಲ್ಲಿ ತುಡುಗಿಸುಂದೋಡಾಡುವ ತರುಳ ಸೊಗಸುಗಾರರಿಗೆ, ನವಯೌವನದಿಂದ ಘೇರೆವ

ಕಾಮಿನಿಯರ ಸಂಪರ್ಕವಾದಂತೆ ಭ್ರಾಂತಿಯುಂಟಾಗುತ್ತಿತ್ತು. ಇಂಥ ಈ ರಮಣೀಯ ಯವಾದ ರಾಜಮಾರ್ಗವನ್ನು ಹಿಡಿದು ಗುಲ್ಲು ಮಾಡದೆ, ಬುದ್ಧರಕ್ಷಿತೆಯೂ ಲವಂಗಿಕೆ ಯೂ ಮಕರಂದ ಮದಯಂತಿಕೆಯರೂ, ಮಾಲತೀಮಾಧವರ ಸಂಕೇತಸ್ಥಾನವಾದ ಕಾಮಂದಕಿಯ ವಿಹಾರೋಪವನದೆಡೆಗೆ ನಡೆದರು.

(ನಂದನವಿಪ್ರಲಂಭವೆಂಬ ೭ನೇ ಅಧ್ಯಾಯ)

## ಎಂಟನೇ ಅಧ್ಯಾಯವು.



ಇತ್ತ ಮಕರಂದನು ಮದಯಂತಿಕೆಯ ಮನವೊಲಿಸಿ ಅವಳೊಡನೆ ಮಧ್ಯರಾತ್ರಿ ಯಲ್ಲಿ ಕಾಮಂದಕಿಯ ವಿಹಾರೋಪವನದೆಡೆಗೆ ನಡೆದಿರಲು, ಅಲ್ಲಿಗೆ ಮೊದಲೇ ಹೋಗಿದ್ದ ಮಾಧವನು ಮಾಲತಿಗೆ ಬಹುಪರಿಯಿಂದ ಸಮಾಧಾನ ಹೇಳಿ ಅವಳನ್ನು ಮೆಚ್ಚಿಸಿಕೊಳ್ಳುವ ಕೆಲಸದಲ್ಲಿ ತೊಡಗಿದ್ದನು. ಗ್ರಾಮದೇವತೆಯ ಗುಡಿಯಿಂದ ಮಾಲತಿಯೊಂದಿಗೆ ಉದ್ಯಾನಕ್ಕೆ ಹೋಗುವಾಗ, ಅಮಾತ್ಯಮಂದಿರದಲ್ಲಿ ನಡೆಯುವ ಸಂಗತಿಗಳನ್ನೆಲ್ಲ ತಿಳಕೊಂಡು ಬರುವದಕ್ಕೆ ಕಲಹಂಸಕನನ್ನು ಮಾಧವನು ಮೊದಲೇ ಕಳುಹಿಸಿ, ಆಮೇಲೆ ತಾನು ಮಾಲತಿಯನ್ನು ಕರಕೊಂಡು ಅವಲೋಕಿತೆಯು ಹಸನು ಮಾಡಿಟ್ಟ ತೋಟಕ್ಕೆ ಹೋಗಿ ತುಸುಹೊತ್ತು ವಿಶ್ರಮಿಸಿ ಬೇಸರಗಳೆದನು. ಬಳಿಕ ಬೇಸಿಗೆ ಕಾಲವಾದುದರಿಂದ ಸಂಜೆಯ ಹೊಂಬಿಸಿಲಿನ ಸೊಬಗಿನಿಂದಲೂ, ಕನ್ನಡಿಯಂತೆ ಥಳಥಳ ಹೊಳೆಯುವ ಜಳಜಳವಾದ ನೀರಿನಿಂದಲೂ, ಸ್ಫಟಿಕದ ಕಲ್ಲಿನಂತೆ ನುಣುಪಾದ ಪಾವಟಿಗೆಗಳಿಂದಲೂ, ಬಲು ಅಂದದಿಂದೊಪ್ಪುವ ಹೊಂಡದಲ್ಲಿ ಮಾಲತಿಯೊಡನೆ ಜಳಕಮಾಡಿ ತೋಟದಲ್ಲಿ ದೊರೆಯುವ ಹಣ್ಣುಹಂಪಲಗಳನ್ನು ತಿಂದು ಸ್ವಲ್ಪ ಅತ್ತಿತ್ತ ಓಡಾಡುವಷ್ಟರಲ್ಲಿ, ಕತ್ತಲೆಯೇ ಆಗಿತ್ತು.

ಅಮಾವಾಸಿ ಮುಂದಿನ ಬಿದಿಗೆಯಾದುದರಿಂದ ಕಾಡಿಗೆಯಂತೆ ಕಪ್ಪಾದ ಪಡುವಣದ ಮುಗಿಲಲ್ಲಿ ಮಿಣಿಮಿಣಿಮಿಣಗುವ ಚಂದ್ರಮನ ಉಂಗುರದಂಥ ಗೀರು, ಹೆಂಗಳೆಯರು ಮುಡಿಯಲ್ಲಿ ಮುಡಕೊಳ್ಳುವ ಕೊರೆದ ಕೇದಗಿಗರಿಯು ಎಸಳನಂತೆ ಶೋಭಿಸುತ್ತಿತ್ತು. ತೆಳ್ಳಗಾಗಿ ಬಿದ್ದಿರುವ ಬೆಳದಿಂಗಳು ನಸುಗಾಳಿಯ ಯೋಗದಿಂದ ಆಗಸದಲ್ಲಿ ದಟ್ಟವಾಗಿ ಹರಡಿಕೊಂಡ ಕೇದಗಿಹುಡಿಯಂತೆ ತೋರುತ್ತಿತ್ತು. ತುಸುಹೊತ್ತಿನ ಮೇಲೆ ಪಶ್ಚಿಮ ಕ್ಷಿತಿಜದಲ್ಲಿ ಚಂದ್ರಮನ ವಲಯವು ಅಡಗಲು, ಕಾಮೀಜನರು ಗುಪ್ತಾಲೋಚನೆ ಮಾಡುವ ಸಂಕೇತಸ್ಥಳಗಳ ಮೇಲೆ ಮುಸುಕುಹಾಕಿದಂತೆ ಎಲ್ಲ ಕಡೆಯಲ್ಲಿ ಕತ್ತಲೆಯು ಹಬ್ಬಿತು. ಕಾಮುಕರಿಗೆ ಅನುಕೂಲವಾದ ಇಂಥ ಸಮಯದಲ್ಲಿ ಮಾಲತೀಮಾಧವರೂ ಅವಲೋಕಿ

ತೆಯೂ ತಿಳಿಗೊಳದ ದಂಡೆಯ ಹತ್ತರಿರುವ ಒಂದು ಹಾಸುಗಲ್ಲಿನ ಮೇಲೆ ಕುಳಿತುಕೊಂಡಿದ್ದರು.

ಮಾಧವನು ಕಾಮತಾಪದಿಂದ ಮೊದಲೇ ತಳಮಳಿಸುತ್ತಿದ್ದನು. ಬೆಳದಿಂಗಳಿಂದಲೂ ತಂಗಾಳಿಯಿಂದಲೂ ಸ್ವಲ್ಪಾದರೂ ಉಪಶಮನವಾಗಬಹುದೆಂದೆಣಿಸಿ ಮೈಯೊಡ್ಡಿ ಮಲಗಿಕೊಂಡರೆ ಅನುತಾಪವು ಕಡಿಮೆಯಾಗುವದರ ಬದಲು ಹೆಚ್ಚೇ ಆಗುತ್ತಿತ್ತು. ಇದಕ್ಕೆ ಮಾಲತಿಯು ಹೊರತು ಬೇರೊಂದು ಉಪಾಯವಿದ್ದಿಲ್ಲ. ಆ ಉಪಾಯವು ಈವೊತ್ತು ಅನಾಯಾಸದಿಂದ ತಾನೇ ದೊರೆಯಿತೆಂದು ಮಾಧವನು ಹಿರಿಹಿರಿ ಹಿಗ್ಗಿದ್ದನು. ಮದನಬಾಧೆಯ ಉರಿಯನ್ನು ನೊಂದಿಸುವದಕ್ಕೆ ಈ ಸಮಯವಾದರೂ ಒಳ್ಳೇ ಅನುಕೂಲವಾಗಿತ್ತು. ಏಕೆಂದರೆ ಸ್ನಾನ ಮಾಡಿ ಬಹಳ ಹೊತ್ತು ಆಗಿದ್ದಿಲ್ಲಾದುದರಿಂದ ಮಾಲತಿಯು ಬಿಡುದಲೆಯ ಕೂದಲ ತುದಿಗಳಿಂದ ನೀರಹನಿಗಳು ನಿಂತುನಿಂತು ತಟತಟ ಉದುರುತ್ತಿದ್ದವು. ಪೀನಕುಚಕಲಶಗಳ ನಡುಪಿನೆದೆಯ ಹಸಿಯು ಇನ್ನೂ ಆರಿದ್ದಿಲ್ಲ. ಮೈಮೇಲಿನ ರೋಮಾಂಚಗಳು ಇನ್ನೂ ಪೂರಾ ಅಡಗಿದ್ದಿಲ್ಲ. ನಲ್ಲನ ಏಕಾಂತಸಂಭಾಷಣೆಗಿನ್ನೂ ಹೊಸಬಳಾದುದರಿಂದ ಮೈಚಳಿಯು ಪೂರಾ ಮುರಿದಿದ್ದಿಲ್ಲ; ಆದಕಾರಣ ಬೆಳದಿಂಗಳಲ್ಲಿ ತಂಪೊಡೆದು ತಟಗಿಕ್ಕುವ ಗಾರಗಲ್ಲಿನಂತೆ, ಎದೆಗುದಿಯಿಂದ ಮೈತುಂಬ ಬೆವರಿನ ತೊಟ್ಟುಗಳು ಸಾಲುಗೊಂಡಿದ್ದವು.

ಈ ಸಮಯದಲ್ಲಿ ಮಾಲತಿಯು ತಣ್ಣನ್ನಮೈಯ ದೃಢಾಲಿಂಗನವು ದೊರೆತಿದ್ದರೆ ಮಾಧವನ ಹರುಷವು ಹಿಡಸದೇ ಹೋಗಬಹುದಿತ್ತು. ಇದಂತೂ ಒತ್ತಟ್ಟಿಗಿರಲಿ, ಅವಳ ಕೆಂದುಟಿಯಿಂದ ಒಂದು ಮಂಜುಳ ಶಬ್ದವಾದರೂ ಹೊರಟಿದ್ದರೆ ಮಾಧವನಿಗೆಷ್ಟೋ ಸಮಾಧಾನವಾಗುತ್ತಿತ್ತು. ಆದರೆ ಮಾಲತಿಯ ಬಿಗುವೆಷ್ಟು! ತಟ್ಟನೇ ಒಲಿಯುವವಳೇ? ಹೆಣ್ಣು ಜಾತಿಯ ಸ್ವಭಾವವೇ ಅಂತಹದು! ನಲ್ಲನು ತುಸು ಕಣ್ಣುಮರೆಯಾದರೆ ಸಾಕು, ನೀರಿನಿಂದ ಹೊರಗೆ ತೆಗೆದುಚಲ್ಲಿದ ಮೀನದಂತೆ ಚಡಪಡಿಸುತ್ತಾರೆ; ಪ್ರಿಯಕರನು ಯಾವಾಗ ಬರುವನೋ, ಯಾವಾಗ ಅವನನ್ನು ಕಣ್ಣುತುಂಬಾ ನೋಡಿ ಅಪ್ಪಿ ಮುದ್ದಾಡುವೆನೋ! ಎಂದು ಹಾತೊರೆಯುತ್ತಾರೆ. ಆದರೆ ಪ್ರಿಯನು ಬಳಿಯಲ್ಲಿ ಬಂದು ಸಲುಗೆದಿಂದ ಮಚ್ಚಿಸಹೋದರೆ ಮುಟ್ಟಲು ಮುರಕಿಯ ಗಿಡದಂತೆ ಮುದುಡಿಮುದ್ದಿಯಾಗುತ್ತಾರೆ. ಮಾಲತಿಯಂತೂ ಮರ್ಯಾದೆಯವಳು, ಹಾಗೂ ಹೊಸಬಳು; ಇದಲ್ಲದೆ ಹಿರಿಕಿರಿಯರ ಅರವಿಲ್ಲದೆ ಸಾಹಸದ ಕೆಲಸ ಮಾಡಿದ್ದಳು. ಇದು ತಿಳಿದರೆ ಮನೆಯವರೂ ನೆರೆಹೊರೆಯವರೂ ಏನೆಂಬುವರೋ ಎಂಬ ಎದೆಗುದಿಯಿಂದ ಬಾಯಿಬಿಚ್ಚಿ ಒಂದಾದರೂ ಮಾತಾಡಲೊಲ್ಲಳು. ಅವಲೋಕಿತೆಯಾದರೂ ಬಹಳ ಬಗೆಯಿಂದ ಹೇಳಿನೋಡಿದಳು: ತನ್ನ ಕೊರಳಾಣೆ ಹಾಕಿದಳು; ಮಾಧವನ ಕೊರಳಾಣೇ ಹಾಕಿದಳು; ಆದರೆ ಏನು ಮಾಡಿದರೂ ವ್ಯರ್ಥ! ಹೋಗು, ನನಗೊಂದೂ ಗೊತ್ತಿಲ್ಲ-ಇಷ್ಟೇ ಮಾತನಾಡಿ ನಾಚಿಕೆಯಿಂದಲೂ ಹೊಟ್ಟೆಯೊಳಗಿನ ಕಸವಿಸಿಯಿಂದಲೂ.

ಮಾಲತಿಯು ಅಳಹತ್ತಿದಳು. ಕಂಬನಿಗಳು ಸೂಸಿ ಕನ್ನಡಿಯಂಥ ಗಲ್ಲದ ಮೇಲೆ ಜೋಲು ಬಿಟ್ಟ ಮುತ್ತಿನೆಳೆಗಳಂತೆ ಹರಿಯಹತ್ತಿದವು.

ಮಾಲತಿಯಾದರೂ ಪಾಪ! ಏನು ಮಾಡುವಳು? ಬಿಕ್ಕಟ್ಟಿನಲ್ಲಿ ಸಿಕ್ಕಿದ್ದಳು. ಬುದ್ಧಿಯನ್ನು ಹೇಳಿ ಸಮಾಧಾನಗೊಳಿಸಲಿಕ್ಕೆ ವಿಶ್ವಾಸದ ಲವಂಗಿಕೆಯೂ ಹತ್ತಿರ ಇದ್ದಿಲ್ಲ. ಲವಂಗಿಕೆಯು ಹೋಗಿ ಬಹಳ ಹೊತ್ತು ಆಗಿತ್ತು. ಅಮಾತ್ಯ ಮಂದಿರದಲ್ಲಿಯ ವರ್ತಮಾನವೇನು? ನಂದನನ ಮದುವೆಯ ಅವಸ್ಥೆಯೇನು? ಮಕರಂದನ ಗತಿಯೇನಾಯಿತು? ಎಂಬ ಸುದ್ದಿಯು ಸುಳುವೇ ಇದ್ದಿಲ್ಲ. ಆದುದರಿಂದ ಮಾಲತಿಯು ಪ್ರಿಯಸಖಿಯಾದ ಲವಂಗಿಕೆಯ ಸಲುವಾಗಿ ಚಡಪಡಿಸಹತ್ತಿದಳು. ಸುದಿಯನ್ನು ತಿಳಕೊಂಡು ಬರುವದಕ್ಕಾಗಿ ಹೋಗಿದ್ದ ಕಲಹಂಸಕನೂ ಬರಲಿಲ್ಲವೆಂದು ಮಾಧವನಿಗೆ ಸಹ ತುಸು ಎದೆಯೊಡಿಕೆಯುಂಟಾಯಿತು. ಏಕಂದರೆ, ಕಾಮಂದಕಿಯು ಮಾಡಿದ ಸಾಹಸವು ಎಡರಿಲ್ಲದೆ ಕೈಗೂಡಿತೋ ಇಲ್ಲವೋ ಯಾರು ಬಲ್ಲರು? ನಡುವೇ ಏನಾದರು ತೊಂದರೆ ತಟ್ಟಿ ಕೆಲಸವು ಹಸಗೆಟ್ಟು ಹೋಗಿದ್ದರೆ ಮಾಡುವದೇನು?—ಈ ಬಗೆಯ ತರ್ಕಗಳು ಮಾಧವನ ಮನಸ್ಸಿನಲ್ಲಿ ಉಂಟಾದವು. ಆದರೆ ಅವಲೋಕಿತೆಯು ನಡುವೆ ಒಮ್ಮೆ ಹೋಗಿ ಕಾಮಂದಿಕೆಯನ್ನು ಕಂಡುಕೊಂಡು ನಂದನನ ಮನೆಯಲ್ಲಿ ನಡೆದ ಸಂಗತಿಗಳನ್ನೆಲ್ಲ ತಿಳಿದುಕೊಂಡು ಬಂದಿದ್ದಳು; ಆದುದರಿಂದ ಈ ಬಗ್ಗೆ ಆಕೆಗೆ ಎಷ್ಟುಮಟ್ಟಿಗೂ ಸಂಶಯವಿದ್ದಿಲ್ಲ. ಮದಯಂತಿಕೆಯು ಮಕರಂದನಿಗೆ ಹೇಗಾದರು ದೊರೆಯುವದೇ ನಿಶ್ಚಯವೆಂದು ತಿಳಿದು, ಈ ಪ್ರಸ್ತಾಪವನ್ನಾದರೂ ತೆಗೆದು ಮಾಲತಿಯ ಬಾಯಿಂದ ಮಾತು ಹೊರಡಿಸಬೇಕೆಂಬ ಯೋಚನೆಯಿಂದ ಮಾಧವನನ್ನು ಕುರಿತು—ಮಹಾರಾಯನೇ, ಮೊದಲು ಆ ದಿವಸ ಶಾರ್ದೂಲ ಪ್ರಹಾರದಿಂದ ಅರವುಗೆಟ್ಟ ನಿನ್ನ ಗೆಳೆಯನು ಮೂರ್ಛೆ ತಿಳಿದೆದ್ದ ಬಳಿಕ ಮಾಲತಿಯು ಹರುಷದಿಂದ ನಿನಗೆ ಅಭಿನಂದಿಸಲು ನಿನ್ನ ಪ್ರಾಣವನ್ನೂ ಶರೀರವನ್ನೂ ಅವಳಿಗರ್ಪಣ ಮಾಡಿದೆ. ಆದರೆ ಈಗ ಮದಯಂತಿಕೆಯು ಮಕರಂದನಿಗೆ ದೊರೆದುದಕ್ಕೆ ಯಾರಾದರು ನಿನಗೆ ಅಭಿನಂದಿಸಿದರೆ ಅವರಿಗೇನು ಕೊಡುವೆ!—ಎಂದು ಅವಲೋಕಿತೆಯು ಅಂದಮಾತಿಗೆ ಮಾಧವನು ತನ್ನ ಕೊರಳಲ್ಲಿದ್ದ ಬಕುಳ ಮಾಲೆಯನ್ನು ತೋರಿಸಿ—ಇಕೋ, ಮೊಟ್ಟ ಮೊದಲು ನಾನು ಮಾಲತಿಯನ್ನು ನೋಡಿ ಮೋಹಿಸಿದುದಕ್ಕೆ ಸಾಕ್ಷಿಯಾಗಿರುವ ಮದನೋದ್ಯಾನಭೂಷಣವಾದ ಬಕುಳಮರದ ಕುಸುಮಗಳಿಂದ ಕಟ್ಟಿದ ಈ ಹಾರವು ಇಲ್ಲೇ ಇರುವದು. ಈ ಬಕುಳಹಾರದ ಮಹಾತ್ಮೆಯನ್ನರಿಯಿಯಾ? ನನ್ನ ನಿಜಕರದಿಂದ ಕಟ್ಟಿದುದೆಂಬ ಅಭಿಮಾನದಿಂದ ಮಾಲತಿಯು ಇದನ್ನು ಪ್ರೇಮದಿಂದ ತರಿಸಿಕೊಂಡು ತನ್ನ ಪೊಂಗಡದಂತೆಸೆವ ಸ್ತನಗಳ ಮೇಲೆ ಹಾಕಿಕೊಂಡಿದ್ದಳು. ಮುಂದೆ ನಂದನನ ಕೂಡ ವಿವಾಹವಾಗುವ ಸಂಧಿಯಲ್ಲಿ ನನ್ನ ಬಗ್ಗೆ ಅತಿ ನಿರಾಶಳಾಗಿ ಲವಂಗಿಕೆಯೆಂಬ ನಂಬಿಕೆಯಿಂದಲೇ ನನ್ನ ಕೊರಳಲ್ಲಿ ಇದನ್ನು ತಿರುಗಿ ಹಾಕಿದಳು. ಇಂಥ ಘನಮಹಿಮೆಯ ಬಕುಳಹಾರವಿರಲು

ಎರಡನೆಯದೇನು ಬೇಕು? ಇದನ್ನೇ ಕಾಣಿಕೆಯಾಗಿ ಕೊಡುವೆನು. ಎಂದೆನಲು, ಆ ಪ್ರೀತಿಯ ಹಾರವನ್ನು ಎರಡನೆಯವರ ಪಾಲಿಗೆ ಹೋಗಗೊಡಬಾರದೆಂಬ ಹೇವವು ಮಾಲತಿಯ ಮನಸ್ಸಿನಲ್ಲಿ ಸಹಜವೇ ಹುಟ್ಟಿತು.

ಇಷ್ಟರಲ್ಲಿ ಹೆಜ್ಜೆಯ ಸಪ್ಪಳವಾಗಿ ಕಲಹಂಸಕನು ಸಮೀಪದಲ್ಲಿ ಬಂದನು. ಇವನನ್ನು ನೋಡಿ ಮಾಲತಿಯು ಹರುಷದಿಂದ—ಅಹಾ! ಮಕರಂದರಾಯುಗೆ ಮದಯಂತಿಕೆಯು ದೊರೆತಳು. ಸಂದೇಹವೇ ಬೇಡ.—ಎಂದು ನುಡಿದ ಕೂಡಲೇ ಮಾಧವನು ಮಾಲತಿಯನ್ನಪ್ಪಿ ತನ್ನ ಕೊರಳೊಳಗಿನ ಬಕುಳಹಾರವನ್ನು ಮಾಲತಿಯ ಕೊರಳಲ್ಲಿ ಹಾಕಿದನು. ಕಲಹಂಸಕನ ಹಿಂದಿನಿಂದ ಲವಂಗಿಕೆಯೂ ಬುದ್ಧರಕ್ಷಿತೆಯೂ ಮದಯಂತಿಕೆಯೂ ಬಂದರು. ಇವರೆಲ್ಲರನ್ನು ನೋಡಿ ಅವಲೋಕಿತೆಯು, ತನ್ನ ಕೆಲಸವನ್ನು ಬುದ್ಧರಕ್ಷಿತೆಯು ಗೆದ್ದಳೆಂದು ಅವಳನ್ನು ಕೊಂಡಾಡಿದಳು; ತನ್ನ ಗೆಳತಿಯಾದ ಲವಂಗಿಕೆಯನ್ನು ಕಂಡು ಮಾಲತಿಗೂ ವಿಶೇಷ ಆನಂದವಾಯಿತು. ಆದರೆ ಇವರ ಹರುಷವು ಬಹಳಹೊತ್ತು ನಿಲ್ಲಲಿಲ್ಲ. ಏಕಂದರೆ ಲವಂಗಿಕೆ ಮುಂತಾದವರು ತೀರ ಬಳಿಯಲ್ಲಿ ಬರಲು, ಅವರ ಮೋರೆಯ ಮೇಲೆ ಗಾಬರಿಯ ಲಕ್ಷಣಗಳು ಹೊಳೆಯಹತ್ತಿದವು, ಮಕರಂದನೂ ಸಂಗಡ ಇದ್ದಿಲ್ಲ. ಆದುದರಿಂದ ಇವರಿಗೇನೋ ತೊಂದರೆಯೊದಗಿರಬಹುದೆಂದು ಸ್ವಾಭಾವಿಕವಾಗಿ ನೋಡುವವರಿಗೆ ತಿಳಿಯುವಂತಿತ್ತು. ಅಷ್ಟರಲ್ಲಿ ಲವಂಗಿಕೆಯು ಮಾಧವನಿಗೆ—ಮಹಾರಾಯನೇ, ನಾವೆಲ್ಲರು ಮದಯಂತಿಕೆಯನ್ನು ಕರಕೊಂಡು ಬರುತ್ತಿರಲು ಹಾದಿಯಲ್ಲಿ ಉಕ್ಕಡದ ಕಾವಲುಗಾರರು ಮಕರಂದನನ್ನು ತಡೆದು ನಿಲ್ಲಿಸಿದರು. ನಿನಗೆ ಸುದ್ದಿಯನ್ನು ಮುಟ್ಟಿಸುವದಕ್ಕೆ ಕಲಹಂಸಕನೊಡನೆ ನಾವು ಇಲ್ಲಿಗೆ ಕಳುಹಲ್ಪಟ್ಟೆವು. ಆದುದರಿಂದ ಬೇಗ ಕಾಪಾಡು. ಮಕರಂದನೊಬ್ಬನೇ ಸಿಕ್ಕಿರುವನು.—ಎಂದು ಗಾಬರಿಯಿಂದ ಗಡಿಬಡಿಸಿ ನುಡಿದಳು. ದೂರದಿಂದ ಜಗಳಾಟದ ಗದ್ದಲವೂ ಹೆಚ್ಚುಹೆಚ್ಚು ಕೇಳಬರುತ್ತಿತ್ತು. ಒಂಟಿಗನಾದ ಮಕರಂದನ ಸಲುವಾಗಿ ಮದಯಂತಿಕೆಯ ಮನಸು ಹರಿದಾಡಹತ್ತಿ, ಚಿತ್ತೋದ್ವೇಗದ ಕುರುಹುಗಳು ಅವಳ ಮೋರೆಯ ಮೇಲೆ ಕಾಣಹತ್ತಿದವು. ಇದನ್ನುಪಲಕ್ಷಿಸಿ ಮಾಧವನು ವಿನಯದಿಂದ ಮದಯಂತಿಕೆಗೆ—ತಂಗೀ, ಇಷ್ಟೇಕೆ ಗಾಬರಿಯಾಗುವೆ? ಮಕರಂದನ ಎದೆಗಾರಿಕೆಯು ನಿನಗೆ ಗೊತ್ತಿಲ್ಲವೇ? ಒಂಟಿಗನಾಗಿದ್ದರೇನಾಯಿತು, ಕಾವಲದವರ ಪಡೆಯನ್ನೆಲ್ಲ ತಳಿಸಿ ಓಡಿಸುವನು, ಚಿಂತೆಯನ್ನು ಬಿಡು. ಮದ್ದಾನೆಯ ಕಠಿಣವಾದ ಗಂಡಸ್ಥಲವನ್ನು ಸೀಳಿ ಮದರಸವನ್ನು ಸೂರೆಮಾಡುವದರಲ್ಲಿ ಚೆನ್ನಾಗಿ ನುರಿತಂಥ ಸಿಂಗನ ಮರಿಯು ವಜ್ರದಂತೆ ಹದನವಾದ ಉಗುರುಗಳಿರಲು ಪರರ ಸಹಾಯವನ್ನಪೇಕ್ಷಿಸುವದೇ? ಆದರೂ ಕಲಹಂಸಕನನ್ನು ಕರಕೊಂಡು ಹೋಗಿ ಮಕರಂದನಿಗೆ ನಾನೂ ನೆರವಾಗುವೆನು. ಚಿಂತಿಸಬೇಡ;—ಎಂದು ಹೇಳಿ ಕಲಹಂಸಕನೊಡನೆ ಹೊರಟು ಹೋದನು. ಮಾಧವನು ಹೋದ ಮೇಲೆ ಮಾಲತಿಯು ಲವಂಗಿಕೆಯನ್ನು ಕರೆದು, ತನ್ನ ಮೇಲೆ ಲಕ್ಷವಿಟ್ಟು ದಯಮಾಡಿ

ಎಚ್ಚರದಿಂದ ಕಾದಾಡಬೇಕೆಂದು ಮಾಧವನಿಗೆ ಹೇಳಿ ಕಳುಹಿಸಿ, ಈ ಸುದ್ದಿಯನ್ನು ಕಾಮಂದಕಿಗೆ ತಿಳಿಸಲೋಸುಗ ಅವಲೋಕಿತೆಯನ್ನೂ ಬುದ್ಧರಕ್ಷಿತೆಯನ್ನೂ ಸಹ ಕಳುಹಿಬಿಟ್ಟಳು. ಲವಂಗಿಕೆಯು ಮಾಧವನನ್ನು ಕಂಡು ಮಾಲತಿಯು ತನಗೆ ಹೇಳಿದ ಮಾತನ್ನು ಅವನಿಗೆ ಅರುಹಬೇಕೆಂದೆಣಿಸಿ ಒತ್ತರದಿಂದ ಹೋಗುವಷ್ಟರಲ್ಲಿ, ಮಾಧವನು ಉದ್ಯಾನವಾಟದಿಂದ ಹೊರಬಿದ್ದು, ಬಡದಾಟದ ಗಲಿಬಿಲಿಯನ್ನು ಕೇಳಿ ಜೀವವು ನಿಲ್ಲದೆ, ಕಲಹಂಸಕನೊಡನೆ ಓಡಿಹೋಗಿ ರಭಸದಿಂದ ಗದ್ದಲದಲ್ಲಿ ಸೇರಿ ಕೊಂಡಿದ್ದನು.

ಇತ್ತ ಮಾಲತಿಯನ್ನೂ ಮದಯಂತಿಕೆಯನ್ನೂ ಮೋಸದಿಂದ ಓಡಿಸಿಕೊಂಡು ಹೋದ ಸುದ್ದಿಯು ಅರಸನಿಗೆ ಹತ್ತಿತ್ತು; ನಂದನನಿಗೆ ತಾನು ಕೊಟ್ಟ ವಚನವು ಹುಸಿಯಾಯಿತೆಂದು ಮನಸ್ಸಿನಲ್ಲಿ ಕುದಿಯುತ್ತ ಅರಸು ಕತಿಗೊಂಡು ಅಪರಾಧಿಗಳನ್ನು ಹಿಡಿದು ತರುವದಕ್ಕೆ ದಂಡು ಕಳುಹಿಸಿ ತಾನು ಮೇಲ್ಮಾಳಿಗೆಯ ಮೇಲೆ ಕುಳಿತುಕೊಂಡು ಹಾದಿಯನ್ನು ನೋಡುತ್ತಿದ್ದನು. ಈ ದಂಡಿನವರು ಕತ್ತಿಗಳನ್ನು ಹಿರಿದುಕೊಂಡು ಉಕ್ಕಡದ ಕಾವಲು ಮನೆಯ ಹತ್ತರ ಬಂದು ಮಕರಂದನನ್ನು ಸುತ್ತುಗಟ್ಟಿ ಉದ್ದಾಮತನದಿಂದ ಅವನ ಮೈ ಮೇಲೆ ಹೋಗಹತ್ತಿದರು, ಮಕರಂದನಾದರೂ ಎದೆಗುಂದದೆ ತನ್ನ ಭುಜಬಲಪರಾಕ್ರಮದಿಂದ ಅವರೆಲ್ಲರನ್ನು ಹಿಂದಕ್ಕೆ ಅಟ್ಟಿ, ಅವರಲ್ಲಿ ಅನೇಕರನ್ನು ಒಳಿತಾಗಿ ಮರ್ದಿಸಿ, ಯಮಸದನದ ಹಾದಿಯನ್ನು ತೋರಿಸಿದನು. ಎಷ್ಟೋ ಕಾವಲದವರು ಮಕರಂದನ ಕೈಯಿಂದ ಮೈಮುರಿ ಪೆಟ್ಟುತಿಂದು ಪಲಾಯನ ಹೇಳಿಸಿದರು. ಈ ಜಂಗುಳಿಯು ಗದ್ದಲದಿಂದ ಒಂದೇ ಕಲಕಲಾಟವೆದ್ದಿತ್ತು. ಅಯೋ! ಸಾಹಸಿಕನಾದ ಮಕರಂದನೊಬ್ಬನೇ ಇಷ್ಟು ಜನರಕೂಡ ಹೋರುತ್ತಾನಲ್ಲ! ಏನುಗತಿಯು?—ಎಂದು ಗಡಣಗೊಂಡ ನೋಟಕರೆಲ್ಲ ಕನಿಕರಬಡುತ್ತಿದ್ದರು. ಇದೇ ಪ್ರಸಂಗದಲ್ಲಿ ಮಾಧವನು ತನ್ನ ರಟ್ಟೆಯ ಕಸುವಿನಿಂದ ಇಕ್ಕಟ್ಟಿನ ಜನಸಂದಣಿಯನೋರೆಮಾಡಿ ಒಳನುಗ್ಗಿ ದಂಡಿನವರ ಕೈಗಳಿಂದಲೇ ಆಯುಧಗಳನ್ನು ಕಸುಗೊಂಡು ಅವರ ಪರಾಮರ್ಶವನ್ನು ಚೆನ್ನಾಗಿ ತೆಗೆದುಕೊಂಡು ಮಕರಂದನಿಗೆ ಒಳ್ಳೇ ಸಮಯದಲ್ಲಿ ನೆರವಾದನು. ಇವರೀರ್ವ ಬಂಟರು ಕೆಲಹೊತ್ತು ಕಲಿತನದಿಂದ ಕಾದಿ, ಬಂದ ಕಾಲಾಳುಗಳ ಎಲವುಗಳನ್ನು ಪುಡಿಪುಡಿ ಮಾಡಿ, ಅವರ ಕೊಬ್ಬಾಟವನ್ನೆಲ್ಲ ಒಂದರಗಳಿಗೆಯಲ್ಲಿ ಅಡಗಿಸಿ ಬಿಟ್ಟರು. ಈ ಹೋರಾಟದಲ್ಲಿ ಎಷ್ಟೋ ಜನರು ಹತರಾಗಿ ನೆಲದ ಮೇಲೆ ಒರಗಿದ್ದರಿಂದ ಹಾದಿಯು ತುಂಬಿ ಹೋಗಿತ್ತು. ಅಕಟಕಟಾ! ಮನುಷ್ಯದೇಹವು ಎಷ್ಟು ಅಶಾಶ್ವತವು! ಈ ಸೈನಿಕರು ಈಗಿನ ತನ್ನು ಹೆಂಡಂದಿರೊಡನೆ ಪ್ರೇಮದಿಂದ ಲೋಲಾಡಿ ಬಂದು ಒಂದೇ ಕ್ಷಣದಲ್ಲಿ ಈ ಗತಿಯನ್ನು ಹೊಂದಿದರಲ್ಲ! ಸಂಸಾರಿಕರ ಅದೃಷ್ಟವು ಯಾರಿಗೂ ತಿಳಿಯದು! ಹೀಗೆಂದು ಮಾಧವಮಕರಂದರು ಸಹ ಮರುಗಿದರು.

ಈ ನಡೆದ ಸಂಗತಿಯನ್ನೆಲ್ಲ ಅರಮನೆಯ ಉಪ್ಪರಿಗೆಯಮೇಲೆ ಕುಳಿತಿದ್ದ ಅರಸನು ಕೇಳಿ ಅಚರಿಗೊಂಡು, ಮಾಧವಮಕರಂದರ ಶೌರ್ಯಕ್ಕೆ ಮೆಚ್ಚಿ, ಒಬ್ಬ ದೂತನನು

ಕಳುಹಿ ಆವರೀರ್ವರನ್ನು ವಿನಯದಿಂದ ಕರಕೊಂಡು ಬರಹೇಳಿದನು. ಆ ದೂತನು ಬಂದು ಅತಿನಮ್ರತೆಯಿಂದ ಕೈಜೋಡಿಸಿ ತಲೆವಾಗಿ ದೊರೆಗಳು ತಮ್ಮ ಕಲಿತನಕ್ಕೆ ಮೆಚ್ಚಿ ತಮ್ಮನ್ನು ಕಾಣಲಪೇಕ್ಷಿಸುತ್ತಾರೆ; ಅರಮನೆಗೆ ದಯಮಾಡಿಸುವದು. ಎಂದು ಮರ್ಯಾದೆಯಿಂದ ಹೇಳಲು ಮಾಧವನೂ ಮಕರಂದನೂ ಕಲಹಂಸಕನೊಡನೆ ಅರಮನೆಗೆ ತೆರಳಿದರು. ಅಲ್ಲಿ ಮಹಾಲಿನಲ್ಲಿ ಅರಸನನ್ನು ಕಂಡು ದೂರದಿಂದಲೇ ನೆಲಮುಟ್ಟಿ ವಂದನೆಗೈದು, ಉಚಿತಾಸನದಲ್ಲಿ ಕುಳಿತುಕೊಂಡರು. ಅರಸನು ಇವರೀರ್ವರ ಮೋರೆಯ ಮೇಲಿನ ರಾಜತೇಜಸ್ಸನ್ನು ಕಂಡು ಬೆರಗಾಗಿ, ಸಂಗಡಬಂದ ಕಲಹಂಸಕನಿಂದ ಇವರ ಕುಲನಾಮಗಳನ್ನು ತಿಳಕೊಂಡು ಹರುಷಿತನಾಗಿ, ಮೇಲಕ್ಕೆ ಕರೆದು ಬಹುಮಾನವಮಾಡಿ, ಮರ್ಯಾದೆಯಿಂದ ತಿರುಗಿ ಕಳುಹಿಸಿದನು. ಆ ಬಳಿಕ ಒಡೆಯರು ತನ್ನ ಮೇಲೆ ತಪ್ಪು ಹೊರಿಸಿ ತನ್ನನ್ನೆಲ್ಲಿ ದಂಡಿಸುವರೋ ಎಂಬ ಭೀತಿಯಿಂದ ಹೆದರಿರುವ ಅಮಾತ್ಯನಾದ ಭೂರಿವಸುವನ್ನೂ, ತನಗೆ ಮಾಲತಿಯು ಇಂಗು ಹಚ್ಚಿ ಹೋದಳೆಂಬ ಹೊಟ್ಟೇಕಿಚ್ಚಿನಿಂದ ಉರಿಯುವ ಅರಮನೆಯ ನಗೆಗಾರನಾದ ನಂದನನನ್ನೂ ಅರಸನು ಕರೆಕಳುಹಿಸಿ— ಏನಿರೈ! ನಿಮಗೆ ಇಂಥ ಭುವನಾಲಂಕಾರರೂ ಸುದ್ಗುಣಮಂಡಿತರೂ ನವಚಂದ್ರಸುಂದರರೂ ಕುಲದೀಪಕರೂ ಆದ ಅಳಿಯಂದಿರು ದೊರೆತಮೇಲೆ ಹಳಹಳಿ ಏಕೆ? ಆದದ್ದು ಒಳಿತಾಯಿತು ಹೋಗಿರಿ;—ಎಂದು ಮೃದುನುಡಿಗಳಿಂದ ಅವರನ್ನು ಸಂತೈಸಿ ಅವರಿಗಪ್ಪಣೆಯನ್ನಿತ್ತು ವಿಶ್ರಮಿಸುವದಕ್ಕಾಗಿ ತಾನೂ ಅಂತರ್ಗೃಹವನ್ನು ಸೇರಿದನು.

ಇತ್ತ ಮಾಧವನು, ಮಕರಂದನೂ ತಾನೂ ಮಾಡಿದ ತಪ್ಪಿನ ಸಲುವಾಗಿ ದೊರೆಯು ತಮ್ಮನ್ನು ದಂಡಿಸದೆ ಅತಿಸತ್ಕಾರದೊಡನೆ ಕಂಡು ಕಳುಹಿದುದಕ್ಕೆ ಅರಸನ ದೊಡ್ಡ ಮನಸ್ಸನ್ನು ಹೊಗಳುತ್ತ, ತಮ್ಮ ಗೆಲವಿನ ಸುದ್ದಿಯನ್ನು ಕಾಮಂದಕೆಗರುಹುವದಕ್ಕೆ ಕಲಹಂಸಕನನ್ನು ಕಳುಹಿ, ಮದಯಂತಿಕೆಯ ಸುದ್ದಿಯನ್ನು ಮಕರಂದನ ಬಾಯಿಂದ ಮಾಲತಿಯ ಮುಂದೆ ಹೇಳಿಸಿ ಅವಳ ಲಜ್ಜಾವನತ ಮುಖವನ್ನೂ ಹಿಡಿಸಲಾರದ ಸಂಭ್ರಮವ ನೋಡಿ ತಾನೂ ಉಲ್ಲಾಸಬಡಬೇಕೆಂಬ ಉತ್ಸುಕತೆಯಿಂದ ಉದ್ಯಾನವಾಟದೆಡೆಗೆ ಲಗುಬಗೆಯಿಂದ ಮಕರಂದನೊಂದಿಗೆ ಸಾಗಿದನು. ಆ ಉದ್ಯಾನಕ್ಕೆ ಇವರೀರ್ವರು ಬಂದು ತಲುಪುವದರೊಳಗಾಗಿ ಅಲ್ಲಿ ಅತಿದುಃಖಕರವಾದೊಂದು ಸಂಗತಿಯು ಒದಗಿತ್ತು; ಅದೇನೆಂದರೆ:— ಮಾಲತಿಯು ಎಚ್ಚರದಿಂದ ಕಾದುವ ಬಗ್ಗೆ ಮಾಧವನಿಗೆ ಹೇಳುವದಕ್ಕಾಗಿ ಲವಂಗಿಕೆಯನ್ನು ಕಳುಹಿ ಕೊಟ್ಟಬಳಿಕ ತನ್ನ ಗೆಳತಿಯು ತೀವ್ರ ತಿರುಗಿ ಬರಲಿಲ್ಲವೆಂದು ಆತುರಬಟ್ಟು, ತುಸು ಮುಂದೆ ಹೋಗಿ ನೋಡಿಬರುತ್ತೇನೆ; ನೀನು ಇಲ್ಲೇ ಕುಳಿತಿರು. ಎಂದು ಮದಯಂತಿಕೆಗೆ ಹೇಳಿ, ತಾನೊಬ್ಬಳೇ ಉದ್ಯಾನವಾಟದ ಬಾಗಿಲಹತ್ತರ ಬಂದು ಹಾದೀ ಕಾಯುತ್ತ ಕುಳಿತಿರಲು ಆಕೆಯ ಬಲಹುಬ್ಬು ಹಾರಿತು. ಅಯ್ಯೋ! ಏನು ಅನಿಷ್ಟ ಬರುವದೊ? ಇನ್ನೇನು ಮಾಡಲಿ! ಎಂದೆನ್ನುವಷ್ಟರಲ್ಲಿ ವಿಕ್ರಾಳಸ್ವರೂಪದ ಕಪಾಲಕುಂಡಲೆಯನ್ನೇ ತನ್ನೆದುರಿ

ನಲ್ಲಿ ಕಂಡು ಹೌಹಾರಿ ಬಾಯಿಂದ ಮಾತು ಹೊರಡದೆ ಗದಗದ ನಡುಗೆ ನೆಲಕ್ಕೆ ಬಿದ್ದು ಚಿಟ್ಟನೆ ಚೀರಿದಳು. ಹೊಟ್ಟೆಯುರಿದ ಕಪಾಲಕುಂಡಲೆಯು ಇಂಥ ಸಂಧಿಯನ್ನೇ ಹುಡುಕುತ್ತಿದ್ದಳು. ಕೂಡಲೇ ಮಾಲತಿಯ ಕುತ್ತಿಗೆಯನ್ನು ಕೈಯಿಂದ ಒತ್ತಿಹಿಡಿದು ಸಿಟ್ಟಿನಿಂದ ಎಲೇ ಪಾಪೀ! ಒದರು ಒದರು, ಪುಣ್ಯಾತ್ಮರಾದ ತಾಪಸೀ ಜನರನ್ನು ಕೊಲ್ಲುವ ನಿನ್ನ ನಾಥನನ್ನು ಒದರು; ಬಂದು ನಿನ್ನನ್ನು ಬಿಡಿಸಿಕೊಳ್ಳಲಿ. ಗಿಡಗನ ಬಾಯಿಯಲ್ಲಿ ಬಿದ್ದ ಪಾರಿವಾಳದ ಹಕ್ಕಿಯಂತೆ ಸುಮ್ಮನೆ ಯಾಕೆ ಒದ್ದಾಡುವೆ. ಶ್ರೀ ಪರ್ವತಕ್ಕೆ ಕೊಂಡೊಯಿದು ನಿನ್ನವಯುವಗಳನ್ನು ತುಂಡುತುಂಡುಮಾಡಿ ನಿನ್ನಪ್ರಾಣವನ್ನು ಈಗಲೇ ಹೀರುವೆನು. ಹೀಗೆಂದು ಮಾಲತಿಯನ್ನೆತ್ತಿಕೊಂಡು ತನ್ನ ಸ್ಥಾನವಾದ ಶ್ರೀ ಪರ್ವತಕ್ಕೆ ನಡೆದಳು. ಉದ್ಯಾನದೊಳಗಿದ್ದ ಮದಯಂತಿಕೆಯು ಮಾಲತಿಯ ದನಿಯು ಕೇಳಿದಂತಾಗಿ ಮಾಲತಿಯನ್ನು ಹುಡುಕುತ್ತ ಬಾಗಿಲಹತ್ತರ ಬರುವಷ್ಟರಲ್ಲಿ ತುಸು ಅಂತರದಮೇಲೆ ತಿರುಗಿ ಬರುವ ಲವಂಗಿಕೆಯು ಗುರ್ತು ಹಿಡಿದು; ಏನೇ ಆ ಮಹಾರಾಯನನ್ನು ಕಂಡಿಯಾ? ಎಂದ ಮಾತಿಗೆ ಲವಂಗಿಕೆಯು ನಡೆದ ಸಂಗತಿಯನ್ನೆಲ್ಲ ತಿಳಿಸಿ, ಮಾಲತಿಯೆಲ್ಲಿ? ಕಾಣುವದಿಲ್ಲ! ಎಂದು ಕೇಳಿದಳು. ಆಗಲೇ ನಿನ್ನನ್ನು ನೋಡುವದಕ್ಕೆ ಹೊರಗೆ ಹೋದಳು; ನಾನೂ ಅವಳನ್ನು ನೋಡಿಲ್ಲ; ಇಲ್ಲೇ ತೋಟದ ಗುಂಪಿನಲ್ಲಿ ಎಲ್ಲಿಯಾದರೂ ಇರಬಹುದು. ಹುಡುಕುವ ನಡೆ- ಎಂದು ಮದಯಂತಿಕೆಯು ಲವಂಗಿಕೆಯೊಡನೆ ತೋಟದಲ್ಲಿ ಸೇರಿ " ಮಾಲತೀ, ಏ! ಮಾಲತೀ " ಎಂದು ಇಬ್ಬರೂ ಒದರೊದರಿ ಹುಡುಕಹತ್ತಿದರು. ಆದರೆ ಮಾಲತಿಯು ಎಲ್ಲಿಂದ ಬರುವಳು!

ಅಷ್ಟರಲ್ಲಿ ಮಾಧವಮಕರಂದರೂ ತೋಟಕ್ಕೆ ಬಂದು ತಲುಪಿದರು. ಮೊದಲು ಮಾಲತಿಯ ಮುಖಕಮಲವನ್ನು ಕಂಡು ಆನಂದಪಡಬೇಕೆಂದು ಮಾಧವನು ಆತುರದಿಂದ ಹೊಂಡದ ದಂಡೆಯಮೇಲೆ ಹೋಗಿ ನೋಡಲು ಅಲ್ಲಿ ಮಾಲತಿಯು ಇದ್ದಿಲ್ಲ. ಅಲ್ಲಿಂದ ಮುಂದೆ ತೋಟದೊಳಗೆ ಹೋಗಿ ಅತ್ತಿತ್ತ ಓಡಾಡುವಷ್ಟರಲ್ಲಿ ಇವರ ಹೆಜ್ಜೆಯ ಸಪ್ಪುಕೇಳಿ ಲವಂಗಿಕೆಯು ಯಾರೆಂಬದು ತಿಳಿಯದೆ, " ಗೆಳತೀ ಮಾಲತೀ " ಎಂದು ಮಾತಾಡಿಸ ಹೋದಳು. ಆದರೆ ಮಾಧವನನ್ನೂ ಮಕರಂದನನ್ನೂ ಕಂಡು ನಿರಾಶೆಯಿಂದ ಅಯ್ಯೋ! ನಿಮ್ಮ ಹೆಜ್ಜೆಯ ಸಪ್ಪಳ ಕೇಳಿ ಮೋಸಹೋದೆನು! ಮಾಲತಿಯು ಎಲ್ಲಿಯೋ ಹೋದಳು! ಇನ್ನೇನು ಗತಿ! ಎನಲು ಮಾಧವನ ಎದೆಯೊಡೆದು ನೀರಾಯಿತು; ಎಡಗಣ್ಣು ಹಾರಹತ್ತಿತು. ಬಳಿಕ ಮದಯಂತಿಕೆಯು ಮಾಧವನು ತೋಟದಿಂದ ಹೊರಟುಹೋದ ತರುವಾಯ ನಡೆದ ಸಂಗತಿಯನ್ನೆಲ್ಲ ಅವರಿಗೆ ವಿವರಿಸಿ ಹೇಳಲು ಮಾಧವನು ತೀರ ಎದೆಗುಂದಿ ಏನೋ ಘಾತವಾಗಿರುವದೇ ನಿಜವೆಂದು ಆಕ್ರೋಶ ಮಾಡಹತ್ತಿದನು. ಹಾ! ಪ್ರಿಯಸಖೀ! ಮಾಲತೀ! ಎಂದು ಲವಂಗಿಕೆಯು ಅಳಹತ್ತಿದಳು. ಮಕರಂದನಿಗೂ ತುಸು ಎತ್ತರತತ್ತರವಾಯಿತು. ಮಾಲತಿಯು ಜೀವದಿಂದ ಬದುಕಿರುವಳೋ ಇಲ್ಲವೋ, ಎಂಬ ಬಗ್ಗೆ

ಅವನಿಗೂ ಮನಸ್ಸಿನಲ್ಲಿ ಸಂದೇಹ ಹುಟ್ಟಿತು. ಯಾಕಂದರೆ ಇಷ್ಟಮಿತ್ರ ಬಂಧುಬಳಗದವರ ಸಂಗತಿಯಿಂದುಂಟಾಗುವ ಸೌಖ್ಯವು ಕುಡಿಮಿಂಚಿನಂತೆ ಬಹುತರ ಚಂಚಲವಾಗಿಯೂ ಕ್ಷಣಿಕವಾಗಿಯೂ ಇರುತ್ತದೆ. ಆದರೂ ಈ ಸಮಯದಲ್ಲಿ ತನ್ನ ಇಂಗಿತವನ್ನು ಹೊರಗೆಡು ವುವದು ಉಚಿತವಲ್ಲೆಂದೆಣಿಸಿ ಎಲ್ಲರಿಗೂ ಸಮಾಧಾನ ಹೇಳಿ ಮಾಧವನನ್ನು ಕುರಿತು— ಗೆಳೆಯನೇ ಹುಚ್ಚನಂತೆ ತಿಳಿಯದೆ ಹೀಗೇಕೆ ಹಲುಬುವೆ? ಮಾಲತಿಯು ನಿನ್ನ ಸಲುವಾಗಿ ಭಯಪಟ್ಟು ಕಾಮಂದಕಿಯ ವಿಹಾರಕ್ಕೆ ಒಂದುವೇಳೆ ಹೋಗಿರಬಹುದು. ಅಲ್ಲಿ ಹೋಗಿ ವಿಚಾರಿಸಿದರೆ ಎಲ್ಲ ಸಂಗತಿಯು ತಾನೇ ತಿಳಿಯುವದು. ಹೋಗಿ ನೋಡುವ ನಡೆ. ಹೀಗೆಂದು ಎಲ್ಲರನ್ನು ಕರಕೊಂಡು ಕಾಮಂದಕಿಯ ಮಠದ ಕಡೆಗೆ ತೆರಳಿದನು.

---

( ಮಾಲತಿಯುಪಹರಣವೆಂಬ ಎಂಟನೆಯ ಅಧ್ಯಾಯವು )

## ೯ನೇ ಅಧ್ಯಾಯವು.

ಮಕರಂದನು ಮಾಧವನನ್ನು ಕರಕೊಂಡು ಕಾಮಂದಕಿಯ ಮಠಕ್ಕೆ ಹೊರಡು ವಷ್ಟರಲ್ಲಿ ಮೂಡಣದಲ್ಲಿ ನಸಕು ಹರೆದು ಬೆಳ್ಳಗೆ ಬೆಳಗಾಗಿತ್ತು. ಕೂಡಲೆ ಪೂರ್ವ ಕ್ಷಿತಿಜ ದಲ್ಲಿ ಕೆಂಪೊಡೆದು ಕೆಂಗಾವಿನ ಚಿನ್ನದ ಗುಂಡಿನಂತೆಸೆವ ಸೂರ್ಯಬಿಂಬವು ಮೆಲ್ಲಮೆಲ್ಲನೆ ತಲೆದೋರಹತ್ತಿತು. ಈ ಹೊಬಿಸಿಲಿನ ಸಮಯದಲ್ಲಿ ಪದ್ಮಾವತೀ ಪಟ್ಟಣದ ಸೊಬಗನ್ನು ಬಣ್ಣಿಸಲಳವಲ್ಲ. ಪೊಳಲೊಳಗಿನ ಎತ್ತರವಾದ ಕಳಸಗಳ ಮೇಲೆಲ್ಲ ಕೆಂಗದಿರುಗಳು ಬಿದ್ದು ಮುಗುಳುವದರಿಂದ ಕಣ್ಣು ಕುಕ್ಕಿಸುವಂತೆ ಥಳಥಳಸುವ ಹೊಳಪು ಪಡಿನೇಸರಿನ ಭ್ರಾಂತಿ ಯನ್ನು ಹುಟ್ಟಿಸುತ್ತಿತ್ತು. ಪಾರಾ ಮತ್ತು ಸಿಂಧು ಹೊಳೆಗಳು ತಮ್ಮ ನಿರ್ಮಳವಾದ ನೀರಿನ ಹಾಳೆಯಿಂದ ಪದ್ಮಾವತೀ ನಗರವನ್ನು ಸುತ್ತುಗಟ್ಟಿದುದರಿಂದ ಪಟ್ಟಣದೊಳಗಿನ ಎತ್ತರವಾದ ಕೊತ್ತಳಗಳೂ ಉಪ್ಪರಿಗೆಗಳೂ ಗೋಪುರಗಳೂ ಮೇಲಿಂದ ನೋಡುವವರಿಗೆ ಆಕಾಶವನ್ನು ಹರಿದು ಆ ಛಿದ್ರದೊಳಗಿಂದ ತಮ್ಮ ತಲೆಗಳನ್ನು ಮೇಲಕ್ಕೆತ್ತಿ ತೋರುವವೋ ಏನೋ ಎಂಬಂತೆ ಕಂಗೊಳಿಸುತ್ತಿದ್ದವು. ಸಮೀಪದಲ್ಲಿಯೇ ತನ್ನ ಜುಳಜುಳವಾದ ನೀರಿನ ಅಲೆಗಳಿಂದೊಪ್ಪುವ ಲವಣಾ ಎಂಬ ಹೆಸರಿನ ಬೇರೊಂದು ಹೊಳೆಯು ದಂಡೆಯಮೇಲೆ ಹಸುರು ಹುಲ್ಲು ಬೆಳೆದುದರಿಂದ ಹಸುಗಳಿಗೂ ಪೌರಜರಿಗೂ ಆಹ್ಲಾದಕರವಾಗಿತ್ತು. ಊರ ಬದಿಯಲ್ಲಿಯೇ ಸಿಂಧು ನದಿಯು ತಡಸಲವಾಗಿ ಎತ್ತರದ ಮೇಲಿಂದ ಬೀಳುವದ ರಿಂದ ನೆಲವನ್ನು ಬಗಿದು ರಸಾತಳವನ್ನು ಸೇರುವಂತೆ ಕಾಣಿಸುತ್ತಿತ್ತು. ಈ ತಡಸಲದ ಪ್ರವಾಹವು ಸೆಳವಿನಿಂದ ಬಂಡೆಗಲ್ಲಿನ ಮೇಲೆ ಅಪ್ಪಳಿಸುವಾಗ ಹುಟ್ಟಿದ ನಾದವು ಬಳಿಯ

ಲ್ಲಿಯ ಗುಡ್ಡಗವಿಗಳೊಳಗಿಂದ ಹೊಯಿಲುಗೊಂಡು ಹೊಸಮೋಡದ ಗುಡಗಿನಂತೆ ಗಂಭೀರವಾಗಿಯೂ ಪ್ರಚಂಡವಾಗಿಯೂ ಕೇಳಬರುತ್ತಿತ್ತು. ಊರ ಸುತ್ತಲಿನ ಅಡವಿಯಲ್ಲಿ ದಟ್ಟವಾಗಿ ಬೆಳೆದ ಶ್ರೀಚಂದನ ತೇಗು ಕರಿಮತ್ತಿ ಸಿರಿಸಲ ಬೆಲಪತ್ರೆ ಬಸರಿ ಆಲ ನೇರಿಲು ಮೊದಲಾದ ಮರಗಳ ಝುಡಪಿನಿಂದ ಕಾಡೆಲ್ಲ ಕತ್ತಲುಗವಿದಿತ್ತು. ಪಟ್ಟಣದ ಬೇರೊಂದು ಮಗ್ಗಲಲ್ಲಿ ಮಧುಮತಿಯೆಂಬ ಹೊಳೆಯೂ ಸಿಂಧುನದಿಯೂ ಸಂಗಮವಾಗಿ ಮಹಾಕ್ಷೇತ್ರವೆಂದೆನಿಸುತ್ತಿತ್ತು. ಈ ಪವಿತ್ರವಾದ ಸಂಗಮದಲ್ಲಿ ಜಗದಾದಿಗುರುವೂ ನಿಗಮನಿಧಿಯೂ ಭುವನಪಾವನನೂ ಚಂದ್ರಶೇಖರನೂ ಮದನಾಂತಕನೂ ಆದ ಭವಾನೀಪತಿಯು ಸ್ವಯಂಭುವನಾಗಿ ಸುವರ್ಣಬಿಂದು ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಹೊಂದಿದ್ದನು. ಈ ಸುವರ್ಣಬಿಂದು ದೇವಾಲಯದ ತುಸು ಮುಂದೆ ಬೇಸಿಗೆಯ ಕಾಲದ ಕಾರ್ಮೋಡದಂತೆ ಕಪ್ಪಾದ ತಪ್ಪಲಿನಿಂದಲೂ ಕರ್ಕಶವಾದ ಶಬ್ದವನ್ನು ಮಾಡುವ ಉನ್ಮತ್ತಮಯೂರಗಳಿಂದಲೂ ನಾನಾಪಕ್ಷಿಗಳ ಗೂಡುಗಳ ಸಮೂಹದಿಂದ ಇಕ್ಕಟ್ಟಾಗಿ ತೋರುವ ವೃಕ್ಷಗಳಿಂದಲೂ ಶೋಭಿಸುವ ಬೃಹದಶ್ಮ ಎಂಬ ಪರ್ವತವು ಕಣ್ಣಿಗೆ ಬಲು ಇಂಪಾಗಿ ಸೊಗಯಿಸುತ್ತಿತ್ತು. ಈ ಬೆಟ್ಟದ ಅಡವಿಯಲ್ಲಿರುವ ಗುಹೆಗಳಲ್ಲಿ ವಾಸಮಾಡಿಕೊಂಡಿರುವ ಕರಡಿಗಳೂ ಕಾಡುಮಿಕಗಳೂ ಕರ್ಣಕಠೋರವಾದ ಗುರುಕೆಗಳಿಂದ ಹೆದರಿಕೆಯನ್ನುಂಟು ಮಾಡುತ್ತಿದ್ದವು. ಅಲ್ಲಲ್ಲಿ ಓಡಾಡುವ ಸೊಕ್ಕಾನೆಗಳು ಹಾಲುಮತ್ತೀಗಿಡದ ರೆಂಬೆಗಳನ್ನು ತುಡುಕಿ ತಮ್ಮ ಸೊಂಡಿಲುಗಳಿಂದ ಹಿಂಡುವದರಿಂದುಂಟಾದ ಪರಿಮಳವು ಎಲ್ಲ ಕಡೆಯಲ್ಲಿ ಹಬ್ಬುಗೊಂಡಿತ್ತು. ಗಿಡದಿಂದ ಗಿಡಕ್ಕೆ ಹಾರುವ ಲಾವಕ್ಕಿ ಟಿಟ್ಟಿಭ ಪಾರಿವಾಣ ಗೊರವಂಕ ಕುಕ್ಕುಟ ಮೊದಲಾದ ಹಕ್ಕಿಗಳು ಕಿಲಿಬಿಲಿ ಶಬ್ದದಿಂದ ಕಾಡಿನಲ್ಲಿ ಕೀಸರಿಡಿಸಿದ್ದವು.

ಪದ್ಮಾವತಿಯು ನಿತ್ಯದಲ್ಲಿ ಇಷ್ಟು ಬೆಡಗಿನಿಂದೆಸೆಯುತ್ತಿದ್ದರೂ ಈ ಹೊತ್ತು ಮಾಲತಿಯಿಲ್ಲದುದರಿಂದ ಕುಂಕುಮತಿಲಕವಿಲ್ಲದ ನವವಧುವಿನಂತೆ ಯಾಕೋ ಭಣಭಣ ಕಾಣುತ್ತಿತ್ತು. ಮಾಧವನೂ ಮಕರಂದನೂ ಮನಸಿನ ದುಗುಮುಗಿಯಿಂದಲೇ ಕಾಮಂದಕಿಯ ಮಠಕ್ಕೆ ಬಂದು ಮುಟ್ಟಿದರು. ಕಾಮಂದಕಿಯು ಕಲಹಂಸನಿಂದ ಮಾಧವಮಕರಂದರ ಗೆಲವಿನ ಸುದ್ದಿಯನ್ನು ಮೊದಲೇ ಕೇಳಿ ಹರ್ಷಿತಳಾಗಿ ನಿಶ್ಚಿಂತೆಯಿಂದ ತನ್ನ ನಿತ್ಯದ ಧರ್ಮಕರ್ಮದಲ್ಲಿ ತೊಡಗಿದ್ದಳು. ಮುಂದೆ ಇಂಥ ಅಪಘಾತದ ಸುದ್ದಿಯು ತನ್ನ ಕಿವಿಯಲ್ಲಿ ಬಿದ್ದೀತೆಂದು ಅವಳು ಕನಸುಮನಸಿನಲ್ಲಿ ಸಹ ನೆನೆಸಿದ್ದಿಲ್ಲ. ಇಷ್ಟರೊಳಗೆ ಎಲ್ಲರೂ ಬಂದು ಮಾಲತಿಯ ಬಗ್ಗೆ ಕೇಳಲು ಕಾಮಂದಕಿಯು ಅರುವುಗೆಟ್ಟು ಹೌಹಾರಿಹೋದಳು. ಕಾಮಂದಕಿಯು ಈ ಗತಿಯನ್ನು ನೋಡಿ ಮಾಧವನೂ ಲವಂಗಿಕೆಯೂ ಎದೆಯೆದೆ ಬಡಕೊಂಡು ರೋದನ ಮಾಡಹತ್ತಿದರು. ಕರ್ಣಪರಂಪರೆಯಿಂದ ಈ ಶೋಕಕರ ವಾರ್ತೆಯು ಊರಲ್ಲೆಲ್ಲ ಹಬ್ಬಿ ಅಮಾತ್ಯ ಭೂರಿವಸುವಿನ ಮನೆಯಲ್ಲಂತೂ ರಂಬಾಟವೆದ್ದಿತು. ನಾಲ್ಕೂ ಕಡೆಗೆ ಕುದುರೆಯ ಸವಾರರನ್ನು ಕಳುಹಿಸಿದರು; ಕಾಲಾಳುಗಳನ್ನು ಓಡಿಸಿದರು. ಎಲ್ಲೆ

ಲ್ಲಿಯ ಮೂಲೆಗೊಂಪೆಗಳಲ್ಲಿ ಹುಡುಕಿದರೂ ಮಾಲತಿಯ ಸುಳವೇ ಇಲ್ಲ. ಬರುಹೋಗುವ ಹಾದೀಕಾರರನ್ನೆಲ್ಲ ಕೇಳಿ ನೋಡಿದರು; ಆದರೆ ಯಾರನ್ನು ಕೇಳಿದರೆ ಏನು ಪ್ರಯೋಜನ? ಮಾಲತಿಯ ಗತಿಯು ಏನಾಗಿತ್ತೋ ದೇವರೇಬಲ್ಲ! ಮೊದಲು ಒಮ್ಮೆ ಏನೋ ಪೂರ್ವಜನ್ಮದ ಪುಣ್ಯದಿಂದ ಗಂಡಾಂತರ ತಪ್ಪಿ ಕುತ್ತಿನಿಂದ ಬದುಕಿದ್ದಳು. ಈ ಸಾರೆ ಎಲ್ಲ ಉಪಾಯಗಳೂ ಪ್ರಯತ್ನಗಳೂ ಗೊತ್ತುಗೇಡಾದವು. [ ಗೊತ್ತಿಗೆ ಮುಟ್ಟಲಿಲ್ಲ ]

ಬಿಸಿಲು ತೀರ ತಲೆಯ ಮೇಲೆ ಏರಿ ತಿರುಗಿ ಇಳಿಹೊತ್ತಾಗಬಂತು. ಊರೆಲ್ಲ ಹಾಳ್ಹಾಳು ಸುರಿಯ ಹತ್ತಿತು. ಇನ್ನೂ ಯಾವ ಮಾತಿಗೂ ಗೊತ್ತಿಲ್ಲ. ಮಾಧವನಿಗೆ ಊರು ಬೇಸರಾಯಿತು.; ಆಪ್ತ ಇಷ್ಟರು ಬೇಡಾದರು; ಜೀವವು ಒಲ್ಲೆನಿಸಿತು. ಪಾಪ! ಏನು ಮಾಡ್ಯಾನು? ಒಂದು ಕಡೆ ಮಾಲತಿಯು ತಿರುಗಿ ದೊರೆಯ ಬಹುದೆಂಬ ಬಗ್ಗೆ ಪೂರಾ ಆಶೆಯೂ ಇಲ್ಲ, ಇಲ್ಲವೆ ತೀರ ಕೈಮೀರಿ ಹೋದಳೆಂಬ ಮಾತಿನಲ್ಲಿ ತೀರಾ ನಿರಾಶೆಯೂ ಇಲ್ಲ; ತ್ರಿಶಂಕುವಿನಂತೆ ನಡುವೇ ಸಂದೇಹದೋಲಾರೂಢನಾದುದರಿಂದ ಮಾಧವನ ಚಿತ್ತವು ಮೋಹಾಂಧಕಾರದಲ್ಲಿ ಮುಳುಗಿ ಹೋಯಿತು. ಅದೃಷ್ಟವೇ ತಿರುಗಿ ಬಿದ್ದುದರಿಂದ ಮುಂದಿನ ಹಾದಿಯು ಅವನಿಗೆ ತೋಚಲಿಲ್ಲ ಹಾ! ಮಾಲತೀ! ಅಯ್ಯೋ ನಿಷ್ಠುರಳೇ ಒಮ್ಮಿಂದೊಮ್ಮೆ ನನ್ನನ್ನಗಲಿ ಎಲ್ಲಿ ಹೋದೆ! ಒಂದಾದರು ಮಾತನಾಡು! ಎಂದು ಒಂದೇಸವನೇ ಹಲುಬಹತ್ತಿದನು. ಏನು ಆಶ್ಚರ್ಯವು? ಮಾಲತಿಯಂಥ ವಸ್ತುವು ಜಗತ್ತಿನಲ್ಲಿ ಪುನಃ ದೊರೆಸು ಬಹುದೇ? ಕೋಮಲಾಂಗಿಯಾದರೂ ಅನಂಗಮಹಾತಾಪದಿಂದುಂಟಾದ ದಾರುಣಾವಸ್ಥೆಯನ್ನು ಮಾಧವನೋಸುಗ ಎಷ್ಟೆಂತ ಸೈರಿಸಿದಳು! ಅದಕ್ಕೆ ಮಿತಿಯುಂಟೇ? ನಂದನನ ಕೂಡ ವಿವಾಹವಾಗುವ ಸುಮಯದಲ್ಲಿ ಮಾಧವನು ತನಗೆ ದೊರೆಯುವದಿಲ್ಲವೆಂದು ನಿಶ್ಚಯವಾಗಿ ತಿಳಿದುಕೊಂಡು ತನ್ನ ಪ್ರಾಣವನ್ನು ಸಹ ಹುಲ್ಲಿನಂತೆಣಿಸಿ ಘೋರ ಕರ್ಮವನ್ನು ಮಾಡಲೆಸಗಿದ್ದಳು. ಮರ್ಮಭೇದಕವಾದ ನುಡಿಗಳಿಂದ ತನ್ನ ಪ್ರೇಮವನ್ನೆಲ್ಲ ಬಚ್ಚಿಡದೆ ವ್ಯಕ್ತಮಾಡಿದಳು. ಕೊನೆಯಲ್ಲಿ ತನ್ನ ಅಪೇಕ್ಷಿತ ವಲ್ಲಭನಾದ ಮಾಧವನನ್ನೇ ಎದುರಿನಲ್ಲಿ ಕಂಡು ತನ್ನ ದೇಹವನ್ನು ಅವನಿಗೆ ಅರ್ಪಿಸಲಿಕ್ಕೆ ಹಿಂಜರಿಯಲಿಲ್ಲ. ಹಿರಿಯರೊಪ್ಪಿಗೆಯಿಲ್ಲದೆ ಇಂಥ ಸಾಹಸವನ್ನು ಮಾಡಲುಜ್ಜುಗಿಸಿದುದೇನು ಸಾಧಾರಣ ಕೆಲಸವೇ? ಛೀ! ತಲೆಗೆ ತಲೆಗೊಡುವ ಇಂಥ ಮನೋವಲ್ಲಭೆಯನ್ನು ಕಳಕೊಂಡು ಲೋಕದಲ್ಲಿ ಜೀವಿಸುವದೇತಕ್ಕೆ? ತನ್ನ ಇಚ್ಛಿತಾರ್ಥವನ್ನು ಸಂಪಾದಿಸದಿರುವ ನರದೇಹವನ್ನು ಭೂಮಿಗೆ ಭಾರವಾಗಿ ಹೊತ್ತು ಕೊಂಡಿರುವದು ಯಾತರಸಲುವಾಗಿ? ಈ ತರದ ಕಲ್ಪನೆಗಳಿಂದ ಮಾಧವನು ತೀರ ಹುಚ್ಚನಾದನು. ಅಯ್ಯೋ! ಹೃದಯವು ಸುಮ್ಮನೇ ತಳಮಳಿಸುತ್ತದೆ! ಎರಡು ಹೋಳಾಗಿ ಸೀಳವೊಲ್ಲದೇಕೆ! ದೇಹವು ಮೋಹವಶವಾಯಿತಲ್ಲ! ನಿಶ್ಚೇಷ್ಟವಾಗಬಾರದೆ! ಅಕಟಕಟಾ! ಒಳಗಿನ ಉರಿಯಿಂದ ಮೆಯ್ಯೆಲ್ಲ ಸುಡಹತ್ತಿದೆ! ಪೂರಾ ಸುಟ್ಟು ಬೂದಿ ಯಾಕಾಗವೊಲ್ಲದು? ಅಮಮಾ! ಈ ಕಿಡಿಗೇಡಿ ವಿಧಿಯ ಕಠಿಣ ಪ್ರಹಾ

ರವನ್ನು ಹೇಗೆ ತಾಳಲಿ! ಪಟ್ಟನೆ ಪ್ರಾಣವಾದರೂ ತೊಲಗಲೊಲ್ಲದು! ಏನು ಮಾಡಲಿ? ಎಲ್ಲಿ ಹೋಗಲಿ?—ಎಂದು ಮಾಧವನು ನಿಟ್ಟುಸಿರು ಬಿಟ್ಟು ಭ್ರಮಿಷ್ಟನಂತೆ ಆಕ್ರೋಶಮಾಡತೊಡಗಿದನು. ಯಾತರಿಂದಲೂ ಸಮಾಧಾನವಾಗಲೊಲ್ಲದು. ನಿರ್ಜನವಾದ ಅಡವಿಯಲ್ಲಿ ಯಾರ ಕಾಟವೂ ಇಲ್ಲದೆ ಕಾಲಕ್ರಮಣಮಾಡಬೇಕೆಂದೆಣಿಸಿ ಮನೆ ಬಿಟ್ಟು ತೆರಳಿದನು. ಪ್ರಿಯಮಿತ್ರನಾದ ಮಕರಂದನೂ ಹಿಂಬಾಲಿಸಿದನು. ಉರಿಯುವ ಬಿಸಿಲಿನ ಪರಿವೆ ಸಹ ಇಲ್ಲದೆ ಹಾಗೇ ಬೊಕ್ಕದಲೆಯಿಂದಲೂ ಬರೆಗಾಲಿನಿಂದಲೂ ಅಡ್ಡಾಡುವ ಮಾಧವನನ್ನು ಕಂಡು ಮಕರಂದನು, ಎಳೆದಾವರೆಗಳ ಪರಿಮಳದಿಂದಲೂ ಶೀತಳವಾದ ತುಂತುರ ಹನಿಗಳಿಂದಲೂ ಕೂಡಿ ಬೀಸುವ ತಂಗಾಳಿಯಿಂದ ಅತಿ ಮನೋಹರವಾದೊಂದು ತಿಳಿಗೊಳಕ್ಕೆ ಕರೆದೊಯ್ದು, ಕಣ್ಸವಿಯಾದ ಸುತ್ತಲಿನ ಬನಸಿರಿಯನ್ನು ಬಣ್ಣಿಸಿ ಮಾಧವನ ದುಮ್ಮಾಳವನ್ನು ಹೋಗಲಾಡಿಸಬೇಕೆಂದೆಣಿಸಿ, ಕೊಳದ ದಂಡೆಯಮೇಲೆ ದಟ್ಟನಾಗಿ ಬಿದ್ದ ನೆರಳಲ್ಲಿ ಮಾಧವದನ್ನು ಕುಳ್ಳಿರಿಸಿದನು.

ಆ ಕೊಳದಲ್ಲಿ ಮತ್ತಕಲಹಂಸಪಕ್ಷಿಗಳು ಒಂದು ಬೆಳ್ದಾವರೆಯಿಂದ ಮತ್ತೊಂದು ಬೆಳ್ದಾವರೆಗೆ ಹಾರಾಡಿ ಕ್ರೀಡಿಸುತ್ತಿದ್ದುದರಿಂದ ಅವುಗಳ ರೆಕ್ಕೆಗಳ ಅಲೆದಾಟದಿಂದ ಹೊಯ್ದಾಡುವ ಕಮಲದ ದೇಟುಗಳು ಕುತ್ತಿಗೆಯನ್ನು ಮಣಿಸಿ ಮುರುಕಿನಿಂದ ಒಯ್ಯಾರಮಾಡುವ ವಾರಾಂಗನೆಯರಂತೆ ಕಂಗೊಳಿಸುತ್ತಿದ್ದವು. ಅಲ್ಲಲ್ಲಿ ನೀರೊಳಗೆ ಉದ್ದವಾಗಿ ಬೆಳೆದ ಬತ್ತಗಳು ಚಂದವಾಗಿ ಕಾಣಿಸುತ್ತಿದ್ದವು. ಕೆಲವೆಡೆಯಲ್ಲಿ ಅರೆಬಿರಿದ ಮಧುಮಾಲತಿಯ ಮೊಗ್ಗೆಗಳು ಸಾಲುಗೊಂಡಿದ್ದವು. ಅರಳಿದ ಬಿಳೇ ಕಣಗಲ ಹೂವಿನಿಂದ ತುಂಬಿಕೊಂಡುದುದರಿಂದ ನಗುವಂತೆ ತೋರುವ ಗುಡ್ಡದ ಓರೆಯಲ್ಲಿ ನರ್ತನಮಾಡುವ ನವಿಲುಗಳಿಗೆ ತಲೆಯ ಮೇಲೆ ಸಂಚಾರಮಾಡುವ ಬಿಳಿಮೋಡಗಳು ಮೇಲ್ಕಟ್ಟಿನಂತೊಪ್ಪುತ್ತಿದ್ದವು. ನಸುಗಪ್ಪಾದ ಕಡವಾಲ ಮರದ ಹೂಗಳಿಂದ ಹಾಸಿದ ಬೆಟ್ಟದ ಇಳಕಲು ಮೋಡ ಮುಸುಕಿದಂತೆ ತೋರುತ್ತಿತ್ತು. ಅಲ್ಲಲ್ಲಿ ಹೊಳೆಹಳ್ಳಗಳ ಬದಿಯಲ್ಲಿ ಬೆಳೆದ ಆಣಬೆ ಬಾಳೆ ಇಪ್ಪೆ ಮೊದಲಾದ ಮರಗಳಿಂದ ಕಾನನವು ರಮಣೀಯವಾಗಿ ಶೋಭಿಸುತ್ತಿತ್ತು. ಮತ್ತಿ ಸಾಲ ತಾಲ ಮುಂತಾದ ಗಿಡಗಳ ಪರಿಮಳವು ಎಲ್ಲ ಕಡೆಯಲ್ಲಿ ಹಬ್ಬುಗೊಂಡಿತ್ತು. ಬೇಸಿಗೆ ಕಾಲವಳಿದು ಮಳೆಗಾಲವೊದಗುವ ಸಂಧಿಯಾದುದರಿಂದ ತುಷಾರದಿಂದ ಕೂಡಿದ ಮೂಡಣದ ಬಿರುಗಾಳಿಯು ಬೀಸಲೆಸಗಿ ಮುಗಿಲಲ್ಲಿ ಮೋಡಗಳು ಗುಂಪುಗುಂಪಾಗಿ ತಲೆದೋರಹತ್ತಿದವು. ನಡುನಡುವೆ ಎಡೆಗೊಂಡು ಜಡಿಯುವ ಅಡ್ಡ ಮಳೆಯಿಂದೆದ್ದ ನೆಲಹುಡಿಯು ಆಲ್ಹಾದವನ್ನುಂಟು ಮಾಡುತ್ತಿತ್ತು. ಉದಿರುವ ಮಳೆಹನಿಗಳೊಳಗಿಂದ ಮಣಿದು ಚದರುವ ಬಾನ್ಮಣಿಯ ಕದಿರುಗಳು ತಮಾಲವೃಕ್ಷದ ಕಪ್ಪು ಬಣ್ಣವನ್ನು ಹೋಲುವ ನೀಲ ಮೇಘದಮೇಲೆ ಸಪ್ತವರ್ಣದ ಬಿಲ್ಲಿನಾಕಾರವಾಗಿ ಮೂಡಿ ಕಾಮರಾಯನು ಹಗೆಗಳಾದ ಕಾಮುಕರ ಮೇಲೆ ಎತ್ತಿದ ಬಿಲ್ಲಿನಂತೆ ವಿರಹಿಗಳಿಗೆ ಭ್ರಾಂತಿಯನ್ನು ಹುಟ್ಟಿಸುತ್ತಿದ್ದವು.

ಕೆಲವೆಡೆಯಲ್ಲಿ ವಾಯುವೇಗದಿಂದ ಚಿಮುಕಿಸಿದಂತೆ ಸೂಸುವ ಜಲಬಿಂದುಗಳ ಮಧ್ಯದಲ್ಲಿ ನವಿಲುಗಳು ತಮ್ಮ ಗರಿಗಳನ್ನು ಕೆದರಿ ನಲಿದಾಡುತ್ತಿದ್ದವು.

ಆದರೆ ಈ ಬನಸಿರಿಯು ಸೊಬಗೆಲ್ಲ ಮಾಧವನಿಗೆ ನಿರರ್ಥಕವಾಗಿತ್ತು. ಮೂಲತಃ ಮನಸಿನಲ್ಲಿಯೇ ಸೊಗಸಿಲ್ಲದ ಬಳಿಕ ಬಾಹ್ಯೋಪಕರಣಗಳಿಂದೇನು ಪ್ರಯೋಜನವು? ಈ ಸೃಷ್ಟಿಸೌಂದರ್ಯವೆಲ್ಲ ಭ್ರಮೆಗೊಂಡ ಮಾಧವನಿಗೆ ಅನುಕೂಲವಾಗುವದರ ಬದಲು ಅವನ ವಿರಹವ್ಯಥೆಯನ್ನು ಮಿತಿಮೀರಿ ಹೆಚ್ಚಿಸಿತು. ಒಂದಾದರೂ ಮಾತು ಬಾಯಿಂದ ಹೊರಡಲೊಲ್ಲದು. ಭ್ರಮಿಷ್ಟನಂತೆ ಶೂನ್ಯದೃಷ್ಟಿಯಿಂದ ನೋಡಹತ್ತಿದನು. ಗಾತ್ರಗಳು ಸ್ತಬ್ಧವಾದವು. ಗೆಳೆಯನ ಈಗತಿಯನ್ನು ನೋಡಿ ಮಕರಂದನು ಗಾಬರಿಬಟ್ಟು—"ಅಯ್ಯೋ? ಮಾಲತೀ! ಮಾಲತೀ! ಮಿತ್ರಬಾಂಧವರನ್ನು ಸಹ ಲೆಕ್ಕಿಸದೆ ಕೇವಲ ಮಾಧವನ ಮೇಲಿನ ಪ್ರೇಮದಿಂದಲೇ ಕರಗ್ರಹಣದ ಸಾಹಸವನ್ನು ಮಾಡಿದೆ. ಆದರೆ ಈಗ ಮಾಧವನಲ್ಲಿ ಏನು ಅಪರಾಧವನ್ನು ಕಂಡು ಹೀಗೆ ನಿಷ್ಕರುಣಳಾದೆ! "—ಎಂದು ಶೋಕಮಾಡಹತ್ತಿದನು.

ಆದರೆ ಮಾಧವನಿಗೆ ಯಾತರದೂ ಅರವು ಉಳಿಯಲಿಲ್ಲ. ಇಂದ್ರಿಯಗಳೆಲ್ಲ ಮೋಹವಶವಾದವು. ತೂಕಡಿಸುವವನಂತೆ ಮೆಲ್ಲನೆ ಅರೆಗಣ್ಣು ಮುಚ್ಚಿ ನೆಲದ ಮೇಲೆ ಗೋಣು ಚಲ್ಲಿ ಬಿದ್ದನು. ಇದನ್ನು ನೋಡಿ ಮಕರಂದನ ಎದೆಯೊಡೆಯಿತು; ಧೈರ್ಯವು ಕುಗ್ಗಿತು; ಹೊಟ್ಟೆಯಲ್ಲಿ ಕಸವಿಸಿಯುಂಟಾಯಿತು; ಕಣ್ಣು ಕತ್ತಲೆಗೂಡಿಸಿತು; ಜಗತ್ತೆಲ್ಲ ಶೂನ್ಯವಾಗಿ ತೋರಹತ್ತಿತು! ಬಂಧುಜನರಿಗೆ ಬೆಳದಿಂಗಳ ಹಬ್ಬದಂತೆಯೂ ಮಾಲತಿಯ ಕಣ್ಣಿಗೆ ಆನಂದವನ್ನೀಯುವ ಚಂದ್ರಮನಂತೆಯೂ ಜೀವಲೋಕಕ್ಕೆ ಭೂಷಣನೂ ತನಗೆ ಸುಖದಾಯಕನೂ ಆದ ಮಾಧವನು ಮೂರ್ಛೆ ಬಿದ್ದುದನ್ನು ನೋಡಿ ಮಕರಂದನಿಗೆ ಎಷ್ಟು ಕಷ್ಟವಾಗಿರಬಹುದು? ಇಬ್ಬರೂ ಬಾಲ್ಯಸ್ನೇಹಿತರಾದುದರಿಂದಲೂ ಜೀವಕ್ಕೆ ಜೀವ ಕೊಡುವ ಸಹೋದರರಂತಿದ್ದುದರಿಂದಲೂ ಮಾಧವನ ಸ್ಥಿತಿಯನ್ನು ನೋಡಿ ಮಕರಂದನು ವಿಷಾದಪಡುವದೇನಾಶ್ಚರ್ಯವು? ಮಾಧವನನ್ನು ಅಗಲಿ ಇದ್ದದ್ದು ಮಕರಂದನಿಗೆಂದೂ ಗೊತ್ತು ಇದ್ದಿಲ್ಲ; ಮಾಧವನಿಗೆ ಮಕರಂದನು ಹೊರಗಿನ ಪ್ರಾಣದಂತಿದ್ದನು. ಇವರೀರ್ವರ ನಡುವೆ ಅತಿ ನಿಕಟವಾದ ಸಖ್ಯವಿದ್ದುದರಿಂದ, ತನ್ನ ಗೆಳೆಯನು ಒಮ್ಮಿಂದೊಮ್ಮೆ ಎಚ್ಚರದಪ್ಪಿ ಬಿದ್ದುದನ್ನು ನೋಡಿ ಮಕರಂದನು ಮನುಜರಿಗೆ ಸ್ವಾಭಾವಿಕವಾದ ಗಾಬರಿಯಿಂದ ಕೇಡಾಯಿತೆಂದು ತಿಳಿದು—ಅಯ್ಯೋ ಮಿತ್ರನೇ! ನನ್ನ ಸಂಗಡ ಎಷ್ಟು ನಗೆಯಾಡುತ್ತಿದ್ದೆಯಲ್ಲ' ಕಣ್ಣುದೆರೆದು ನೋಡಿ ಆನಂದ ಬಡಿಸಬಾರದೇ! ತುಟಿ ಕದಲಿಸಿ ಒಂದಾದರೂ ಮಾತನಾಡು! ನಿನ್ನ ಪ್ರೀತಿಯ ಗೆಳೆಯನನ್ನು ಮರೆತುಬಿಟ್ಟೆಯಾ!—ಎಂದು ಮಾಧವನ ಗದ್ದವನ್ನು ಎತ್ತೆತ್ತಿ ರೋದನ ಮಾಡಹತ್ತಿದನು.

ಇಷ್ಟರಲ್ಲಿ ಇಂದ್ರನೀಲಮಣಿಯಂತೆ ಕಡುಗಪ್ಪಾದೊಂದು ಮೋಡವು ಮಾಧವನ ಮೇಲೆ ಮಳೆಗರೆಯಲು ಮಾಧವನು ಎಚ್ಚತ್ತು ಕಣ್ಣು ತೆರೆದು ನೋಡುತ್ತಾನೆ;—ಒಂದು

ಚಿಕ್ಕ ಹೊಳೆಯು ಆಚೆಯಲ್ಲಿರುವ ದೂರದ ಬೆಟ್ಟದ ತಲೆಯ ಮೇಲೆ ಕ್ಷಣಕ್ಕೊಂದು ಆಕಾರವನ್ನು ಹೊಂದುತ್ತಿರುವನೇರಿಲ ಹಣ್ಣಿನಂತೊಪ್ಪುವ ಒಂದು ಕಾರ್ಮೋಡವು ಬಿತ್ತು. ಆ ಮೋಡದಿಂದುದುರುವ ಮಳೆಹನಿಗಳಿಗೆ ಆಶೆಗೊಂಡು ಅನೇಕ ಚಾತ ಗಳು ಬಾಯೊಡ್ಡಿ ಅಂತರಿಕ್ಷದಲ್ಲಿ ಹಾರಾಡುತ್ತಿದ್ದವು. ಕೋಮಲ ಬಾಹುಗ ಪ್ರೇಮಾಲಿಂಗವನ್ನೀಯುವ ವಲ್ಲಭೆಯಂತೊಪ್ಪುವ ಸೆಳೆಮಿಂಚು ನಡು ನಡುವೆ ಥಳ ಹೊಳೆಯುತ್ತಿತ್ತು. ಬಗೆ ಬಗೆ ಬಣ್ಣದ ಕಾಮನ ಬಿಲ್ಲು ಮಧ್ಯದಲ್ಲಿ ಅಂದವಾಗಿ ಕಂ ಸುತ್ತಿತ್ತು. ಮೂಡಣದ ನಸುಗಾಳಿಯ ಯೋಗದಿಂದ ಮೋಡದಲ್ಲುಂಟಾದ ವಿಚಿತ್ರ ಗಳು ಜೀವಕಳೆ ತುಂಬಿದ ಮೇಘಾವಯವಗಳಂತೆ ಭ್ರಮೆಗೊಳಿಸುತ್ತಿದ್ದವು. ಆ ಮೋ ನ್ನು ಕಂಡು ಸಚೇತನಪ್ರಾಣಿಯೆಂಬ ಭ್ರಾಂತಿಯಿಂದ ಮಾಧವನು ಅದಕ್ಕೆ ಕೈಮುಗಿ ತನ್ನ ಪ್ರಿಯೆಗೆ ಸುದ್ದಿಯನ್ನು ಮುಟ್ಟಿಸುವದರ ಸಲುವಾಗಿ ಪ್ರಾರ್ಥನೆಯ ಮಾಡತೊ ಗುವಷ್ಟರಲ್ಲಿ ಮೋಡದಲ್ಲಿ ಗುಡುಗಿ ಹತ್ತರದ ಗವಿಯು ದನಿಗೊಟ್ಟಿತು; ಅದನ್ನು ಕೇ ಮೇಘವು ತನಗೆ ಅನುಕೂಲವಾಗಿರುವದೆಂಬ ಮರುಳತನದಿಂದ ಮತ್ತೆ ಕೈಮುಗಿದು— "ಸ್ವಾಮೀ! ಮೇಘರಾಯನೇ! ನೀನು ಲೋಕದಲ್ಲಿ ಸ್ವೇಚ್ಛೆಯಿಂದ ಸಂಚಾರಮಾಡುವಾ ನನ್ನ ಪ್ರಿಯತಮೆಯನ್ನು ದೈವಯೋಗದಿಂದ ಕಂಡರೆ, ಅವಳನ್ನು ಮೊದಲು ಸಮಾಧಾ ಗೊಳಿಸಿ, ಬಳಿಕ ಈ ನಿರ್ಭಾಗ್ಯನಾದ ಮಾಧವನ ಅವಸ್ಥೆಯನ್ನು ಮರೆಯದೆ ಅರುಹು ಆದರೆ ಆ ಕುಸುಮಾರಿಯನ್ನು ಮಾತ್ರ ತೀರ ನಿರಾಸೆಗೊಳಿಸಬೇಡ. ಕಂಡೆಯಾ? ಯಾಕೆ ದರೆ—ಆ ಎರಳೆಗಂಗಳೆಯು ಕೇವಲ ನನ್ನನ್ನು ಮರಳಿ ಕಾಣುವ ಭರವಸದಿಂದಲೇ ಪ್ರಾ ಧಾರಣ ಮಾಡಿಕೊಂಡಿರಬಹುದು—ಎಂದು ಅಂಗಲಾಚಿ ಬೇಡಿಕೊಳ್ಳುವಷ್ಟರಲ್ಲಿ ಮೋ ವು ಬೇರೊಂದು ಕಡೆಗೆ ನಡೆಯಿತು. ಮಾಧವನೂ ಕೆಲಹೊತ್ತು ಅವನ್ನು ಹಿಂಬಾಲಿ ಹೋಗಲು ಮೋಡವು ತೀರ ಕಾಣದಷ್ಟು ದೂರ ಹೋಯಿತು ಕಡೆಗೆ ಮಾಧವನ ನಿರಾಶೆಬಟ್ಟು ಕಾಡಿನಲ್ಲಿ ಹುಚ್ಚನಂತೆ ಅಡ್ಡಾಡುತ್ತ ಗಿಡಬಳ್ಳಿಗಳನ್ನೂ ವನಮೃಗಗಳನ್ನೂ ಬಣ್ಣಿಸಿ—" ಅಯ್ಯೋ, ಪ್ರಮಾದವೇ! ಈ ಬನದಲ್ಲಿ ನನ್ನ ಪ್ರಿಯಳು ವಿಭಕ್ತಳಾಗಿ ಹೋದಂತೆ ಖಂಡಿತವಾಗಿ ತೋರುತ್ತದೆ! ತನ್ನ ದೇಹಕಾಂತಿಯನ್ನು ಈ ಕೆಂಪುಲೋಧ್ರ ಪುಷ್ಪಗಳಲ್ಲಿಯೂ, ನಮ್ರತೆಯನ್ನು ಈ ಲತೆಗಳಲ್ಲಿಯೂ ಇಟ್ಟು ಹೋದಳು; ಎರಳೆಗಳಿ ತನ್ನ ನೋಟವನ್ನೂ ಗಜಗಳಿಗೆ ತನ್ನ ಗತಿಯನ್ನೂ ಕೊಟ್ಟು ಹೋದಳು! ಏನು ಮಾಡಲಿ! ಹಾ ಮಾಲತೀ! ನನ್ನನ್ನಗಲಿ ಎಲ್ಲಿ ಹೋದೆ" —ಎಂದು ಹಲುಬ ಹತ್ತಿದನು. ಸ್ತ್ರೀಗಾತ್ರ ಸೌಂದರ್ಯವನ್ನು ಹೋಲುವ ಎಷ್ಟೋ ಒಡವೆಗಳು ಜಗತ್ತಿನಲ್ಲಿ ಸೃಷ್ಟಿಕರ್ತನಿಂದ ನಿರ್ಮಿ ಸಲ್ಪಟ್ಟಿರುವವೆಂದು ಮಾಧವನಿಗೆಲ್ಲಿಯ ಎಚ್ಚರಿಕೆಯು!

ಈ ಮೇರೆಗೆ ಮಾಧವನೆಂಬ ಚಂದ್ರಮನಿಗೆ ಮೋಹಗ್ರಹಣ ಹತ್ತಿದುದನ್ನು ಕಂಡು ಮಕರಂದನಿಗೂ ಪರಮಾವಧಿ ಖೇದವಾಯಿತು; ಚಿಕ್ಕತನದಿಂದ ಕೂಡಿ ಆಡಿದ ಗುಣವಂತನಾದೊಬ್ಬನೇ ಸ್ನೇಹಿತನು ಹೀಗೆ ಭ್ರಮಿಷ್ಟನಂತೆ ಆಚರಿಸುವದನ್ನು ನೋಡಿ

ನನ್ನ ಎದೆಯಾದರೂ ಯಾಕೆ ಸೀಳಿ ಹೋಗಲೊಲ್ಲದೆಂದು, ಮಕರಂದನು ಮರುಗಿದನು. ಮುಂದಿನ ಯತ್ನವೇನು! ಯಾರಿಗೆ ಮೊರೆಹೋಗಬೇಕು? ಏನೂ ತಿಳಿಯಲೊಲ್ಲದು!

ಮಾಧವನಂತೂ ತೀರ ಅಡ್ಡ ಹಾದಿಯನ್ನೇ ಹಿಡಿದನು. ಗುಡ್ಡ ಗುಡ ತಿರುಗಿ ಕಂಡ ಕಂಡ ವನ್ಯಪಶುಗಳಿಗೆ ಅಡ್ಡಬಿದ್ದು ಮೊರೆಯಿಡಹತ್ತಿದನು. "ಎನಿರೈ! ನನ್ನ ಸರ್ವಾಂಗ ಸುಂದರಿಯಾದ ವಲ್ಲಭೆಯನ್ನು ನೋಡಿದಿರಾ? ಇನ್ನೂ ಚಿಕ್ಕವಳಿದ್ದಳು! ಮದನನು ಅವಳ ಶರೀರದಲ್ಲಿ ಈಗೀಗ ಸಂಚಾರಮಾಡತೊಡಗಿದ್ದನು. ಇಂಥ ಕುಲಕನ್ನಿಕೆಯನ್ನಾರು ಎತ್ತಿಕೊಂಡು ಒಯ್ದರೆಂಬದನ್ನು ದಯಮಾಡಿ ಹೇಳುವಿರಾ?" ಎಂದು ಕೇಳಿ ಕೇಳಿ ದಣಿದನು. ಆದರೆ ಯಾರೂ ಉತ್ತರವನ್ನು ಹೇಳಲೊಲ್ಲರು. ಒಂದು ನವಿಲು ತನ್ನ ಚಂದವಾದ ಗರಿಗಳನ್ನು ಹರಹಿ ಒದರೊದರಿ ಒಯ್ಯಾರದಿಂದ ಕುಣಿಯುವಾಗ ಮಾಧವನ ಮಾತನ್ನೇ ಅಡಗಿಸಿಬಿಟ್ಟಿತು. ಉನ್ಮತ್ತವಾದೊಂದು ಚಕೋರವು ಆನಂದದಿಂದ ಕಣ್ಣುಗಳನ್ನು ತಿರುವುತ್ತಾ ಚುಂಚದಿಂದ ಚುಚ್ಚಿ ಚುಚ್ಚಿ ತನ್ನ ಕಾಂತೆಯನ್ನೊಲಿಸುವದರಲ್ಲಿ ತೊಡಗಿತ್ತು. ಕರೇ ಮೋತಿಯ ಒಂದು ಮುಸುವು ತನ್ನ ಪ್ರಿಯತಮೆಯ ಗಲ್ಲದ ಮೇಲೆ ಹೂಹುಡಿಯಿಂದ ಬಣ್ಣ ಕೊಡುತ್ತಿತ್ತು. ಕೆಮ್ಮೊಗದ ಒಂದು ಕೋಡಗವು ಹಲ್ಲು ಕಿರಿದ ಕಾರಣದಿಂದ ಸೀಳಿದ ದಾಳಿಂಬರ ಹಣ್ಣಿನಂತೆಸೆವ ಹೆಣ್ಣು ಕೋತಿಯ ಮುಖವನ್ನೆತ್ತೆತ್ತಿ ಮುದ್ದಿಸುವದರಲ್ಲಾಸಕ್ತವಾಗಿತ್ತು. ಈ ಮೇರೆಗೆ ಎಲ್ಲವೂ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದ್ದುದರಿಂದ ಮಾಧವನ ಬಿನ್ನಹಕೆ ಎಡೆಯೇ ದೊರೆಯಲಿಲ್ಲ. ಸ್ವಲ್ಪ ಮುಂದೆ ಹೋಗಿ ನೋಡುತ್ತಾನೆ— ಅಲ್ಲಿ ಒಂದಾನೊಂದು ಗಜವು ಹೆಣ್ಣಾನೆಯ ಹೆಗಲಮೇಲೆ ತನ್ನ ಸೊಂಡೆಯನ್ನಿರಿಸಿ ತಿಂಡಿಯಿಂದ ಮುಚ್ಚಿದ ಅದರ ಕಣ್ಣುಗಳನ್ನು ತನ್ನ ಕೋರೆಯಿಂದ ಮೆಲ್ಲನೆ ತುರಿಸುತ್ತಲೂ ತನ್ನ ಮರಗಿವಿಗಳಿಂದ ಗಾಳಿಯ ಹಾಕುತ್ತಲೂ ಅರ್ಧ ತಿಂದ ತದಕಿನ ತೊಪ್ಪಲವನ್ನು ತುತ್ತುಮಾಡಿ ಬಾಯೊಳಗೆ ಚಾಚುತ್ತಲೂ ಹೆಣ್ಣಾನೆಯನ್ನು ಈಲುಮಾಡಿಕೊಳ್ಳುವ ಕ್ರಮದಲ್ಲಿತ್ತು. ಮತ್ತೊಂದೆಡೆಯಲ್ಲಿ ಒಂದು ಕಾಡಾನೆಯು ತನ್ನ ಪ್ರಾಣಕಾಂತೆಯನ್ನು ಕಳಕೊಂಡು ವಿರಹಖೇದದಿಂದ ಹೊಂಡದೊಳಗೆ ಬೆಳೆದ ಹಾಂಸೆಯನ್ನು ಕೂಡ ಮುಟ್ಟಲೊಲ್ಲದು; ಮೋಡವು ಗುಡುಗಲು ಅದಕ್ಕೆ ಪ್ರತ್ಯುತ್ತರವಾಗಿ ಹೂಂಕರಿಸಲೊಲ್ಲದು. ಮದರಸವೆಲ್ಲ ಒಣಗಿಹೋದುದರಿಂದ ಭ್ರಮರಗಳು ಸಹ ಜೇಂಕರಿಸಲೊಲ್ಲವೆಂದು ಮೋರೆಯನ್ನು ತಗ್ಗಿಸಿ ತನ್ನ ವಿಷಾದದಿಂದಲೇ ತಳಮಳಿಸುವ ಆನೆಗೆ ಮಾಧವನ ಚಿಂತೆಯೆಲ್ಲಿ? ಇದರ ಗೊಡವೆಗೆ ಹೋಗಿ ಪ್ರಯೋಜನವಿಲ್ಲವೆಂದು ಮತ್ತೆ ಮುಂದೆಸಾಗಿ ನೋಡುವಷ್ಟರಲ್ಲಿ, ಒಂದು ಕೊಳದೊಳಗೆ ಜೇರಿಂದು ಸೊಕ್ಕಾನೆಯು ತನ್ನ ಪ್ರಾಣವಲ್ಲಭೆಗೆ ಕೇಳಿಸುವಂತೆ ಮಧುರವಾಗಿ ಗದರುತ್ತಲೂ ಹೊಸದಾಗಿ ಅರಳಿದ ಕದಂಬ ಪುಷ್ಪಗಳನ್ನು ತನ್ನ ಸೊಂಡೆಯಿಂದ ಅವುಕಿ ಸೋರುವ ಮದಜಲದಲ್ಲಿ ಬೆರಿಸಿ ಅದರ ಪರಿಮಳವನ್ನೆಲ್ಲ ನೀರಲ್ಲಿ ಕದಡುತ್ತಲೂ ತಾವರೆ ಬಳ್ಳಿಗಳನ್ನು ಜಗ್ಗಿ ಜಗ್ಗಿ ದಳಗಳನ್ನೂ ಎಸಳುಗಳನ್ನೂ ದೇಟುಗಳನ್ನೂ ಗಡ್ಡೆಗಳನೂ

ಬೇರುಗಳನ್ನೂ ಕಿತ್ತಿ ಬಿಸುಟುತ್ತಲೂ ಮರಿಗಿವಿಗಳನ್ನು ನೀರಲ್ಲಿ ಪಟಪಟನೆ ಬಡಿದು ಜಲಬಿಂದುಗಳನ್ನು ಈಡಾಡುತ್ತಲೂ ಸೊಂಡಿಲಲ್ಲಿ ನೀರು ಸೇದಿಕೊಂಡು ತುದಿಯಿಂದ ಭರ್‍ರನೆ ತೂಪಿರಿದು ಕೊಳದಲ್ಲಿ ಈಜಾಡುವ ಹಂಸೆ ಸಾರಸ ಕುರವಕ್ಕಿಗಳ ಮೇಲೆ ತುಂತುರಗಳನ್ನು ಉಗ್ಗಿ ಬೆದರಿಸಿ ಓಡಿಸುತ್ತಲೂ ತನ್ನ ಸಹಚರಿಯೊಂದಿಗೆ ಜಲದಲ್ಲಿ ಮುಳುಗಿ ಕ್ರೀಡಿಸುತ್ತಿತ್ತು; ನಡುನಡುವೆ ಲೀಲೆಯಿಂದ ತಾವರೆ ದಿಂಡಿನೊಳಗಿನ ತಿಳಿಲನ್ನು ಒಸಡೆಯಿಂದ ಅವುಡಿ ಜಿನುಗಾಡ ತುತ್ತನ್ನು ತನ್ನ ಕಾಂತೆಗೆ ನೀಡುತ್ತಲೂ ಆ ಮೇಲೆ ಸುಗಂಧಯುಕ್ತವಾದ ನೀರಿನ ಗುಟುಕನ್ನು ಪ್ರೇಮದಿಂದ ಕೊಡುತ್ತಲೂ ಬಿಸಲಿನ ತಾಪವನ್ನು ಹೋಗಲಾಡಿಸುವದಕ್ಕಾಗಿ ಮೇಲಿಂದಮೇಲೆ ತುಷಾರಗಳನ್ನುದುರಿಸುತ್ತಲೂ ಕೆಲಹೊತ್ತು ಜಲವಿಹಾರ ಮಾಡಿ ಕೊಳದಿಂದೆದ್ದು ತನ್ನ ವಲ್ಲಭೆಯೊಡನೆ ನಡೆಯಿತು. ಇದನ್ನೆಲ್ಲ ನೋಡುತ್ತಿದ್ದ ಮಾಧವನು — ಓಹೋ! ತರುಣಾವಸ್ಥೆಯಲ್ಲಿದ್ದ ಈ ಗಜರಾಯನಿಗೆ ನವವಧೂಸಾಂತ್ವನದ ಚಾತುರ್ಯವು ಚೆನ್ನಾಗಿ ಸಾಧಿಸಿದಂತೆ ಕಾಣುತ್ತದೆ. ಒಳ್ಳೇದು ಮಾತನಾಡಿಸಿ ನೋಡುವ— ಎಂದು ಮುಂದೆ ಹೋಗಿ ಮಾತನಾಡಿಸುವಷ್ಟರಲ್ಲಿ ದೋಷವನ್ನು ಕಂಡು— ಈ ಗಜರಾಯನು ಈ ವರೆಗೆ ಮಾಡಿದ್ದೆಲ್ಲ ವಿಹಿತವಾಯಿತು; ಆದರೆ ಹಾದಿಯಲ್ಲಿ ಹೋಗುವಾಗ ತನ್ನ ಪ್ರಾಣಕಾಂತೆಯ ತಲೆಯಮೇಲೆ ನೀಟಾದ ದೇಟುಳ್ಳ ಕಮಲಪತ್ರದ ಕೊಡೆಯನ್ನು ಹಿಡಿಯಲಿಕ್ಕೆ ತಪ್ಪಿದನು. ಎಂದು ಹಿಂದಿರುಗಿದನು. ಮಕರಂದನು ಬೆನ್ನುಹತ್ತಿ ಬರುತ್ತಲೇ ಇದ್ದನು; ಆದರೂ ಇದರ ಅರಿವು ಮಾಧವನಿಗೆ ಇಲ್ಲೇ ಇಲ್ಲ. ಮಕರಂದನನ್ನು ಎಲ್ಲಿಯೋ ಹಿಂದೆಬಿಟ್ಟು ಬಂದೆನೆಂಬ ಭ್ರಾಂತಿಯಿಂದ ದೊಡ್ಡ ಧ್ವನಿಯಿಂದ ಕೂಗಿ— ಅಯ್ಯೋ! ನಾನೆಂಥ ಮೂಢನು! ಮಕರಂದನನ್ನು ಬಿಟ್ಟು ನಾನೊಬ್ಬನೇ ಈ ಅಡವಿಯಲ್ಲಿ ವನಪಶುಗಳ ಬೆನ್ನುಹತ್ತಿ ತಿರುಗಾಡುತ್ತೇನಲ್ಲ! ಉಸಿರಾಡುವದಾದರೂ ಪಕ್ಕನೇ ಕಟ್ಟಾಗಬಾರದೇ ಗೆಳೆಯನಿಲ್ಲದೆ ಈ ವನ ಸೌಂದರ್ಯವನ್ನು ಏನು ಸುಡಬೇಕು! ಅಯ್ಯೋ ಮಿತ್ರನೇ! ನೀನಿಲ್ಲದೆ ಈ ದಿವಸವನ್ನು ಹೇಗೆಕಳೆಯಲಿ? ಥೂ! ಥೂ! ಜೀವದಗೆಳೆಯನನ್ನು ಕಳಕೊಂಡ ಈ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ! ಹೀಗೆಂದು ಮೋಹಪರವಶನಾಗಿ ಸಹೋದರ ವಾತ್ಸಲ್ಯದಿಂದ ನೆನೆನೆನೆದು ಅಳುವ ಮಾಧವನನ್ನು ಕಂಡು ಮಕರಂದನು— ಗೆಳೆಯನೇ! ಈ ದುರ್ನೈವಿಯಾದ ಮಕರಂದನು ಇಲ್ಲಿಯೇ ಇರುವನು; ಯಾವ ಸುಡುಗಾಡಿಗೂ ಹೋಗಿಲ್ಲ! ನೀನೇಕೆ ರೋದನ ಮಾಡುವೆ? ಎನಲು ಮಾಧವನು— ಪ್ರಿಯನೇ! ಬಾ, ಮೊದಲು ನನಗೊಂದು ಆಲಿಂಗನವನ್ನು ನೀಡು. ಮಾಲತಿಯನ್ನಂತೂ ಪೂರಾ ಕಳಕೊಂಡೆನು! ಈ ಜೀವವೂ ಬೇಸರಾಯಿತು! ಇನ್ನೇನು? ಎಂದು ಕಣ್ಣು ಬೆಳ್ಳಗೆಮಾಡಿ ಮಕರಂದನು ಬಂದು ಹಿಡಿಯುವದರೊಳಗೇ ಕವಳಹತ್ತಿ ಬಿದ್ದನು. ಮಕರಂದನು ಮಾಧವನ ತಲೆಗೆ ನೀರುಬಡಿದು ಅಲ್ಲಾಡಿಸಿ ನೋಡಿದನು. ಸೆರಗಿನಿಂದ ಗಾಳಿಯ ಹಾಕಿದನು. ಏನು ಮಾಡಿದರೂ ಎಚ್ಚರಿಕೆಯೇ ಇಲ್ಲ!

ಮಕರಂದನು ಮಾಧವನ ಮೇಲಿನಮಮತೆಯಿಂದ ಆಪತ್ಕಾಲದಲ್ಲಿ ಅವನ ಜನ್ಮ

ಹತ್ತಿ ಅವನ ಸ್ಥಿತಿಗತಿಗಳನ್ನು ಕಾಯುತ್ತಲೇ ಇದ್ದನು; ಯಾವಕಾಲದಲ್ಲಿ ಏನಾಗುವದೋ ಎಂಬ ಎದೆಗುದಿಯು ಅವನ ಮನಸ್ಸಿನಲ್ಲಿ ಕಟಿಯುತ್ತಲೇ ಇತ್ತು. ಒಮ್ಮೆ ಮೂರ್ಛೆತಪ್ಪಿ ಬಿದ್ದಿದ್ದರೂ ಬೇಗ ಎಚ್ಚರಗೊಂಡು ಎದ್ದಿದ್ದನು; ಅದೇ ಪುನರ್ಜನ್ಮವು! ಈಗಂತೂ ಮಹಾಪ್ರಮಾದವೇ ಆಯಿತು! ಗೆಳೆಯನು ತಿರುಗಿ ಬದಕುವದೇ ಕಷ್ಟವೆಂದು ಖಂಡಿತವಾಗಿ ತಿಳಕೊಂಡನು! ಆಶೆಗಳೆಲ್ಲ ವ್ಯರ್ಥವಾದವು! ದೇಹವು ಜಡವಾಯಿತು! ಜೀವವು ಸ್ತಬ್ಧವಾಯಿತು! ಇಂದ್ರಿಯ ವ್ಯಾಪಾರಗಳು ಕಟ್ಟಾಗಿ ಏನೂ ತಿಳಿಯದಂತಾಯಿತು! ಅಂತೂ ಮಕರಂದನಿಗೆ ಜೀವಲೋಕವು ಇದ್ದೂ ಇಲ್ಲದಂತಾಯಿತು! ಮಾಧವನಂಥ ಅಮೂಲ್ಯ ರತ್ನವನ್ನು ಕಳಕೊಂಡು ಜೀವಿಸುವ ಪ್ರಯೋಜನವು ಅವನಿಗೆ ತೋರಲಿಲ್ಲ! ಮಗ್ಗಲದಲ್ಲಿಯೇ ಒಂದು ಮೊರಡಿ ಇತ್ತು; ಅದರಡಿಯಲ್ಲಿ ಪಾಟಲಾವತಿಯೆಂದು ಕರೆಯಲ್ಪಡುವ ಚಿಕ್ಕದೊಂದು ಹೊಳೆಯು ಹರಿಯುತ್ತಿತ್ತು. ಆ ಮೊರಡೆಯ ಮೇಲಿಂದ ಹಾರಿ ನದಿಯಲ್ಲಿ ಬಿದ್ದು ಪ್ರಾಣ ಕೊಡಬೇಕೆಂದು ಮನಸ್ಸಿನಲ್ಲಿ ಮಾಡಿ ಮೊರಡಿಯನ್ನೇರಿದನು. ಅಷ್ಟರಲ್ಲಿ ಮತ್ತೆ ಮನಸ್ಸು ತಿರುಗಿ ಇನ್ನೊವೆಮ್ಮೆ ಮಾಧವನನ್ನು ಎಬ್ಬಿಸಿ ನೋಡಬೇಕೆಂದು ಹಿಂದಿರುಗಿ ಬಂದನು. ಆದರೆ ಏನು ಫಲವು? ಏನು ಮಾಡಿದರೂ ಮಾಧವನು ಮಿಸುಕಾಡಲೊಲ್ಲನು! ಮಾಧವನು ಇನ್ನೂ ಚಿಕ್ಕವನಾದರೂ ಸಕಲಗುಣಗಳಿಂದ ಸಂಪನ್ನನಾಗಿದ್ದನು. ಆ ಗುಣಗಳನ್ನೆಲ್ಲ ನೆನೆನೆನೆದು ಮಕರಂದನು ಶೋಕ ಮಾಡಹತ್ತಿದನು. ನಿರ್ಮಳನಾದ ಚಂದ್ರನು ರಾಹುಗ್ರಸ್ತನಾದಂತೆಯೂ, ಜಲಪೂರಿತವಾದ ಕಾರ್ಮೋಡವು ಸುಂಟರಗಾಳಿಯಿಂದ ಹಾರಿ ಹೋಗುವಂತೆಯೂ, ಫಲಭರಿತವಾದ ವೃಕ್ಷವು ಕಾಡ್ಗಿಚ್ಚಿನಿಂದ ಸುಟ್ಟು ಬೂದಿಯಾಗುವಂತೆಯೂ, ತ್ರಿಭುವನಲಲಾಮನಾದ ಮಾಧವನ ಗತಿಯಾದುದನ್ನು ಕಂಡುಮಕರಂದನಿಗೆ ಹೊಟ್ಟೆಯುಲ್ಲೆಷ್ಟು ಕಷ್ಟವಾಗಿರಬಹುದು!" ಅಯ್ಯೋ! ಮಾಧವನೇ! ನೀಲೋತ್ಪಲದ ಕಾಂತಿಯನ್ನು ಜರಿಯುವ ನಿನ್ನ ಶ್ಯಾಮಸುಂದರವಾದ ದೇಹವನ್ನು ನೋಡಿ ಮಾಲತಿಯು ತನ್ನ ಮನಸ್ಸನ್ನಾದರೂ ದಣಿಸಲಿಲ್ಲ. ನಾನಾದರೂ ನೀನು ಬದುಕಿರುವಾಗ ಆಲಿಂಗನತೃಪ್ತಿಯನ್ನು ಮಾಡಿಕೊಳ್ಳಲಿಲ್ಲ! ಈಗಾದರೂ ಆಲಿಂಗನಕೊಟ್ಟು ಸಂತೋಷಪಡಿಸಯ್ಯಾ!"—ಎಂದು ಮಾಧವನಮೇಲೆ ಬಿದ್ದುಬಿದ್ದು ಹೊರಳಾಡುತ್ತಲೂ, "ಅಯ್ಯೋ! ಮಿತ್ರನೇ! ವಿದ್ಯಾಸಂಪನ್ನನೇ! ಗುಣನಿಧಿಯೇ! ಮಾಲತೀಪ್ರಾಣವೇ! ಕಾಮಂದಕೀಮಕರಂದಾನಂದಮುಖಚಂದ್ರನೇ! ಒಂದು ನಿಮಿಷವಾದರೂ ಕಣ್ದೆರದು ನೋಡು ನಿನ್ನನ್ನಗಲಿ ನಾನು ಹೇಗೆ ಬದುಕಿರಲಿ! ನಾವೀರ್ವರೂ ಹುಟ್ಟಾ ಒಂದೇ ಮನೆಯಲ್ಲಿ ಬಳೆದು, ಆಡಿ, ಈವರೆಗೂ ಕೂಡಿದ್ದೆವು! ಈಗ ನನ್ನೊಬ್ಬನನ್ನೇ ಬಿಟ್ಟು ಹೋಗುತ್ತೀಯಾ? ಬಂಧು ಜನರಿಂದರ್ಪಿಸಲ್ಪಡುವ ಎಳ್ಳುನೀರನ್ನು ನೀನೊಬ್ಬನೇ ಕುಡಿಯುವದು ಚಂದವೇ!"—ಎಂದು ಮಾಧವನ ಮುಖವನ್ನು ಮುದ್ದಾಡುತ್ತಲೂ, ಆಕ್ರೋಶ ಮಾಡಿಮಾಡಿ ದನಿ ಒಡಕೊಂಡನು. ಕಡೆಗೆ ತೀರ ನಿರಾಶನಾದುದರಿಂದ ಮನಸು ಗಟ್ಟಿಮಾಡಿಕೊಂಡು ಮಾಧವನನ್ನು ಬಿಟ್ಟು ಮರಳಿ ದಿನ್ನೆಯನ್ನೇರಿ ನದಿಯಕಡೆ ಮೋರೆಯನ್ನು ತಿರುವಿ ಕೈಮುಗಿದು—" ಭಗವತೀ ಗಂಗಾಂಬಿಕೇ

ನನ್ನನ್ನು ಹೊಟ್ಟೆಯಲ್ಲಿರಿಸಿಕೊಂಡು ಪಾವನಮಾಡು! ಶ್ರೀಮಾಧವನ ಪುನರ್ಜನ್ಮವಾದಲ್ಲಿಯೇ ನನ್ನನ್ನು ಹುಟ್ಟಿಸಿ ಪುನಃ ಮಾಧವನ ಜತೆಗಾರನನ್ನಾಗಿ ಮಾಡು; ಕಂಡೆಯಾ!,, ಎಂದು ಪ್ರಾರ್ಥಿಸಿ ಹಾರಿಕೊಳ್ಳುವನು—ಇಷ್ಟರೊಳಗೇ ಶ್ರೀಪರ್ವತದಲ್ಲಿ ವಾಸಮಾಡಿಕೊಂಡಿದ್ದ ಕಾಮಂದಕಿಯ ಪೂರ್ವ ಸ್ನೇಹಿತಳಾದ ಸೌದಾಮಿನಿಯೆಂಬ ಯೋಗಿನಿಯು ಗಗನ ಮಾರ್ಗದಿಂದ ಬಂದು ಮಕರಂದನನ್ನು ತಡೆದು, ಛೀಯೆಂದು ಬುದ್ಧೀ ಹೇಳಿ ಮಾಲತಿಯುಕಡಿಯಿಂದ ತಂದ ಬಕುಳಹಾರವನ್ನು ಅವಳು ಬದುಕಿರುವಳೆಂಬ ಗುರ್ತಿಗಾಗಿ ತೋರಿಸಿದಳು. ಕಪಾಲಕುಂಡಲೆಯು ಮಾಲತಿಯನ್ನೆತ್ತಿಕೊಂಡು ಶ್ರೀಪರ್ವತಕ್ಕೆ ಹೋದಾಗ, ಆ ಸುದ್ದಿಯು ಸೌದಾಮಿನಿಗೆ ತಿಳಿದು, ಅವಳು ಕಪಾಲಕುಂಡಲೆಯನ್ನು ಒಳಿತಾಗಿ ಸಿಟ್ಟುಮಾಡಿ, ಮಾಲತಿಯನ್ನು ಬದುಕಿಸಿಕೊಂಡಿದ್ದಳು. ಈ ವರ್ತಮಾನವನ್ನು ವಿರಹವೇದನೆಯಿಂದ ದುಃಖಿಸುವ ಮಾಧವನಿಗೆ ಬೇಗನೆ ಅರುಹಬೇಕೆಂದು ಸೌದಾಮಿನಿಯು ಶ್ರೀಪರ್ವತದಿಂದ ಹೊರಟುಬರುವಾಗ ಮಾಲತಿಯಿಂದ ಮಾಧವಮಕರಂದರ ಮುಖಲಕ್ಷಣಗಳನ್ನು ಗೊತ್ತಿಗಾಗಿ ತಿಳಿದುಕೊಂಡು ಬಂದಿದ್ದಳು. ಆ ಮೇರೆಗೆ ಮಕರಂದನ ಗುರ್ತುಹಿಡಿದು ಮಾಧವನೆಲ್ಲಿ? ಎಂದು ಕೇಳಲು, ಮಕರಂದನು— “ಇಲ್ಲೇ ಅರವುಗೆಟ್ಟು ಬಿದ್ದುದರಿಂದ ವೈರಾಗ್ಯತಾಳಿ ಬಿಟ್ಟು ಬಂದೆನು; ಬೇಗ ಹೋಗಿ ಕಾಣುವ.” ಎಂದು ಸೌದಾಮಿನಿಯೊಡನೆ ಗುಡ್ಡದಿಂದ ಕೆಳಗೆ ಇಳಿಯಹತ್ತಿದನು.

ಇತ್ತ ಗಾಳಿಯ ಸೆಳತದಿಂದ ಮಳೆಹನಿಗಳು ಮಾಧವನಮೇಲೆ ಸೂಸಲು, ಮಾಧವನು ಹೊಡೆದೆಬ್ಬಿಸಿದಂತೆ ಎದ್ದುಕುಳಿತು— “ಅಯ್ಯೋ! ಅದೃಷ್ಟವೇ! ಈ ದುರುಳ ಪವನನು ನನ್ನಮೇಲೆ ಇಷ್ಟು ಕಠೋರನೇಕಾಗಿರಬಹುದು? ನೀರ್ಮೋಡಗಳನ್ನು ಬೀಸಿಕೊಂಡು ಹೋಗಿ ಚಾತಕಗಳನ್ನೂ ಮಯೂರಗಳನ್ನೂ ಬೇಕಾದರೆ ಸುಖಪಡಿಸವಲ್ಲನೇಕೆ? ಆದರೆ ವಿರಹತಾಪಗಳನ್ನೆಲ್ಲ ಮರೆಯಿಸುವ ಮೂರ್ಛೆಯಲ್ಲಿ ನಿಶ್ಚಿಂತರಾಗಿ ಮಲಗಿರುವ ವಿರಹಿಗಳನ್ನೆಚ್ಚರಪಡಿಸಿ ಏನು ಪಡಕೊಳ್ಳುವನು? ಒಳ್ಳೇದು, ಆದದ್ದಾಯಿತು. ಭಗವನ್ ಮಾರುತರಾಯನೇ! ಇನ್ನಾದರೂ ಕದಂಬಕುಸುಮದ ರಜಸ್ಸಿನಕೂಡ ನನ್ನ ಜೀವಿತವನ್ನು ನನ್ನ ಪ್ರಿಯಳ ಬಳಿಯಲ್ಲಿ ಕರಕೊಂಡು ಹೋಗು; ಇಲ್ಲವೆ ಅವಳ ಮೈಯ ಶೀತಲವಾದ ತನಿಗಂಪನ್ನಾದರೂ ತುಸು ತಂದುಕೊಂಡು ಮಹಾರಾಯನೇ! ನನ್ನನ್ನು ಕಾಯುವವನು ನೀನೇ; ನೀನೇ ನನಗೆ ಗತಿ, ನೋಡು!”— ಎಂದು ದೀನನಂತೆ ಸೆರಗೊಡ್ಡಿ ಬೇಡಿಕೊಳ್ಳುತ್ತಿದ್ದನು. ಇಷ್ಟರಲ್ಲಿ ಮಕರಂದನೂ ಸೌದಾಮಿನಿಯೂ ಬಂದು ತನ್ನಿಂದ ತಾನೇ ಎಚ್ಚರಗೊಂಡ ಮಾಧವನನ್ನು ಕಂಡು ಕಡುಹರುಷದಿಂದ— “ಓಹೋ ಕುರುಹಿನ ಬಕುಳಹಾರವನ್ನು ಅರ್ಪಿಸುವ ಒಳ್ಳೇ ಸಂಧಿಯು ಇದೇ”— ಎಂದು ಮೆಲ್ಲನೇ ಹಿಂದಿನಿಂದ ತಿಳಿಯುಗೊಡದೆ ಬಂದು ಸೌದಾಮಿನಿಯು ಮಾಧವನ ಕೈಯಲ್ಲಿ ಬಕುಳಹಾರವನ್ನು ಕೆಡವಿದಳು. ಇದನ್ನು ನೋಡಿ ಮಾಧವನು ವಿಸ್ಮಯದಿಂದಲೂ ಹರುಷದಿಂದಲೂ— “ಇದೇನಚ್ಚರಿಯು? ಮದನೋದ್ಯಾನದ ಅಂಗಳದಲ್ಲಿರುವ ಬಕುಳ ವೃಕ್ಷದ ಹೂವುಗಳಿಂದ

ನಾನೇ ಕಟ್ಟಿದ ಮಾಲೆಯು ಪ್ರಿಯತಮೆಯ ಸ್ತನಭೂಷಣವಾಗಿದ್ದುದು ಇಲ್ಲಿ ಬಂದ ಬಗೆ
ಯೇನು? ( ನೆಟ್ಟಗೆ ದಿಟ್ಟಿಸಿನೋಡಿ )— ಓಹೋ! ಸಂದೇಹವೇ ಬೇಡ. ಆ ಇಂದು
ಸುಂದರಮುಖಿಯು ಅನಂಗಮಂದಿರದಲ್ಲಿ ಬಂದಾಗ ಕುತೂಹಲದಿಂದ ಅವಳನ್ನು ನೋಡು
ವದರಲ್ಲಿ ನಾನು ತೊಡಗಿರಲು ಈ ಹಾರದ ಒಂದು ಕೊನೆಯು ಸರಿಯಾಗಿ ಹೊಂದಿಕೊಂ
ಡಿದ್ದಿಲ್ಲ; ಬಳಿಕ ಅಂಥ ವಿಷಮರಚಿತವಾದ ಮಾಲೆಯನ್ನೇ ಲವಂಗಿಕೆಯು ಬಹುಮಾನ
ದಿಂದ ಇಸುಕೊಂಡು ಹೋಗಿದ್ದಳು; ಅದೇ ಇದು. ( ಕೋಪದಿಂದ ಎದ್ದು ನಿಂತು )—
ಎಲೈ, ಕಠೋರಳಾದ ಮಾಲತಿಯೇ! ನನ್ನ ಪ್ರಾಣಗಳು ತೊಲಗಿಹೋಗಹತ್ತಿವೆ; ಹೃದ
ಯವು ನಷ್ಟವಾಗುತ್ತದೆ; ಮೈಯು ಉರಿಯುತ್ತದೆ; ಜಗತ್ತೆಲ್ಲ ಶೂನ್ಯವಾಗಿ ತೋರಹತ್ತಿದೆ;
ಇಷ್ಟಾದರೂ ಬೇಗ ದರ್ಶನ ಕೊಡದೆ ಪರಿಹಾಸವನ್ನು ನಡೆಸಿರುವೆಯಾ! ಕರುಣಿಸಿ ನೇತ್ರಾ
ನಂದವನ್ನೀಯಬಾರದೆ! ( ಮಾಲತಿಯನ್ನು ಕಾಣದೆ, ಬಕುಳಹಾರವನ್ನು ಕುರಿತು )—
ನನ್ನ ಅರಗಿಳಿಯೇ! ಬಾ! ನಿನ್ನ ಉಪಕಾರವು ನನ್ನಮೇಲೆ ಬಹಳೇ ಆಗಿರುವದು. ನನ್ನ
ಪ್ರಿಯಳಾದ ಕುವಲಯಾಕ್ಷಿಯು ದುಃಸಹವಾದ ಮದನತಾಪದಿಂದ ಸಿಡಿಮಿಡಿಗೊಳ್ಳುವಾಗ
ನನ್ನ ಬದಲು ನಿನ್ನ ಆಲಿಂಗನವೇ ಅವಳ ಪ್ರಾಣಧಾರಣಕ್ಕೆ ಕಾರಣವಾಯಿತು! ಇದಲ್ಲದೆ
ಎಷ್ಟೋಸಾರಿ ನಮ್ಮಿರ್ವರ ನಡುವಿನ ಪ್ರೇಮವನ್ನು ವ್ಯಕ್ತಪಡಿಸುವ ನಿನ್ನ ಬರುಹೋಗು
ವಿಕೆಯನ್ನು ನೆನಪಿಗೆ ತಂದರೆ ಹೊಟ್ಟೆಯಲ್ಲಿ ಕಷ್ಟವಾಗುತ್ತದೆ!— ಹೀಗೆಂದು, ಉಸಿರ್ಗ
ರೆದು ಮಾಲೆಯನ್ನು ಎದೆಯಮೇಲಿರಿಸಿಕೊಂಡು ಮೂರ್ಛೆಹೋಗುವ ಮಾಧವನನ್ನು
ಕಂಡು ಮಕರಂದನು ತಟ್ಟನೆ ಬಂದು ತಡೆದು ಗಾಳಿಯಹಾಕಲು ಮಾಧವನು ಚೇತರಿಸಿ—
"ಮಕರಂದನೇ, ಇಕೋ! ನೋಡು! ಎಲ್ಲಿಂದಲೋ ಮಾಲತಿಯ ಪ್ರೀತಿಯ ಹಾರವು
ಬಂದು ಬಿದ್ದಿರುತ್ತದೆ. ಇಲ್ಲಿ ಹೇಗೆಬಂದಿರಬಹುದು!" ಎಂದುದಕ್ಕೆ ಮಕರಂದನು ಕುರುಹಿನ
ಹಾರವನ್ನು ತಂದ ಯೋಗೀಶ್ವರಿಯಾದ ಸೌದಾಮಿನಿಯನ್ನು ತೋರಿಸಲು ಮಾಧವನು
ದೀನತೆಯಿಂದ ಕೈಮುಗಿದು— ಆರ್ಯಳೇ! ಮಾಲತಿಯು ಜೀವದಿಂದಿರುವಳೋ?—
ಎಂದು ವಿನಯದಿಂದ ಕೇಳಲು ಸೌದಾಮಿನಿಯು— ಮಾಲತಿಯು ಬದುಕಿದ ಬಗೆಯನ್ನೂ
ಹಿಂದೆ ಕರಾಲಾಯತನದಲ್ಲಿ ಮಾಧವನಿಂದ ಹತನಾದ ಅಘೋರಘಂಟನ ವಧದಸೇಡು
ತೀರಿಸಿಕೊಳ್ಳುವದಕ್ಕಾಗಿ ಕಪಾಲಕುಂಡಲೆಯು ಮಾಲತಿಯನ್ನೆತ್ತಿಕೊಂಡು ಹೋದ
ಸುದ್ದಿಯನ್ನೂ ವಿಸ್ತರಿಸಿ ಹೇಳಲು ಮಕರಂದನು— "ಅಯ್ಯೋ! ಹಣೆಯ ಬರಹವೇ!
ರಮಣೀಯವಾದ ಕುಮುದವು ಶರದಿಂದುಚಂದ್ರಿಕೆಯಿಂದ ಕೂಡಿ ಆನಂದದಲ್ಲಿರಲು
ನಡುವೇ ಅಕಾಲಮೇಘವು ಬಂದು ಕೆಲಸಕೆಡಿಸುವದೆಲ್ಲಿಯ ನ್ಯಾಯವು!" ಎಂದು
ನುಡಿಯಲು,

ಮಾಧವ— ಹಾ! ಕಮಲಮುಖಿಯೇ! ಉತ್ಪಾತಕೇತುವಿನಿಂದ ಗ್ರಸಿಸಲ್ಪಡುವ
ಶಶಧರನಂತೆ ಕಪಾಲಕುಂಡಲೆಯು ನಿನ್ನನ್ನು ಕೊಂಡೊಯ್ಯುವಾಗ ನಿನ್ನ ಗತಿ ಏನಾಗಿರಬ
ಹುದು! ಎಲೈ! ನಿಷ್ಠುರಳಾದ ಕಪಾಲಕುಂಡಲೇ! ಸೃಷ್ಟಿಕರ್ತನ ನಿರ್ಮಾಣಕೌಶಲ್ಯವನ್ನು

ದರೂ ನೋಡಿ ನಿನ್ನ ಮನಸೇಕೆ ಕರಗಲಿಲ್ಲ! ಹೀಗೆ ಪೂತನಿಯಂತೆ ಆಚರಿಸುವದುಚಿತವೇ? ಪರಿಮಳದಿಂದ ಘಮಘಮಿಸುವ ಕುಸುಮವನ್ನು ತಲೆಯಲ್ಲಿರಿಸಿಕೊಳ್ಳದೆ ಕಾಲಿನಿಂದೊದ್ದು ತುಳಿಯುವದೆಂಥ ನಗೆಗೇಡು? ಎಂದನು. ಅದಕ್ಕೆ--

ಸೌದಾಮಿನಿ— ವತ್ಸನೇ, ಅವಳು ಸ್ವಭಾವದಿಂದಲೇ ಕ್ರೂರಳು. ತಾನು ಅಡ್ಡ ಬರದಿದ್ದರೆ ಈ ಹೊತ್ತಿಗೆ ಅವಳು ತನ್ನ ದುಷ್ಕರ್ಮವನ್ನು ಕಡೆಗಾಣಿಸದೆ ಬಿಡುತ್ತಿದ್ದಿಲ್ಲ ಎನ್ನಲು—

ಮಾಧವಮಕರಂದರು ( ನಮಿಸಿ ) — ಮಹಾರಾಯಳೇ! ನಿನ್ನುಪಕಾರವನ್ನು ನಾವೆಂದೆಂದಿಗೂ ಮರೆಯಲಾರೆವು. ಆದರೆ ನಮ್ಮ ಮೇಲೆ ಇಷ್ಟು ಬಂಧುವಾತ್ಸಲ್ಯವನ್ನು ತೋರಿಸಿದ ಆರ್ಯಳಾರೆಂಬದನ್ನು ತಿಳಕೊಳ್ಳಲು ಕುತೂಹಲವುಳ್ಳವರಾಗಿದ್ದೇವೆ. ಎಂದುದಕ್ಕೆ—ಸೌದಾಮುನಿಯು—“ ಈಗ ಹೇಳುವ ಹೊತ್ತಿಲ್ಲ. ಮುಂದೆ ನಿಮಗೆ ತಾನೇ ತಿಳಿದೀತು. ನಾನು ಸದ್ಗುರು ಸೇವೆಯಿಂದಲೂ, ಅನುಷ್ಠಾನದಿಂದಲೂ, ಚಾಂದ್ರಾಯಣಾದಿ ವ್ರತಗಳಿಂದಲೂ, ಮಂತ್ರತಂತ್ರಾದಿಗಳಿಂದಲೂ ಯೋಗಸಿದ್ಧಿಯನ್ನು ಪಡೆದ ಒಬ್ಬ ಜೋಗಿತಿಯು. ‘ ಆಕ್ಷೇಪಿಣಿ ’ ಎಂಬ ಸಿದ್ಧಿಯಲ್ಲಿ ನಿಷ್ಣಾತಳಿದ್ದೇನೆ. ಅದರ ಪ್ರಭಾವವನ್ನು ನಿಮಗಾಗಿ ತೋರಿಸುತ್ತೇನೆ. ” ಹೀಗೆಂದು ಮಾಧವನನ್ನೆತ್ತಿಕೊಂಡು ಗಗನಮಾರ್ಗದಿಂದ ಹಾರಿಹೋದಳು.

ಇತ್ತ ಮಕರಂದನೊಬ್ಬನೇ ಬೆರಗಾಗಿ ನಿಂತನು. ಮಿಂಚಿದಕೂಡಲೆ ಮೊದಲು ಕ್ಷಣಹೊತ್ತು ಬೆಳಗಿ ಆಮೇಲೆ ಕಣ್ಣುಕಗ್ಗತ್ತಲೆಗೂಡಿಸುವಂತೆ ಮಕರಂದನ ಗತಿಯಾಗಿ. ಅವನಿಗಾವುದೂ ತಿಳಿಯದಾಯಿತು ಮಾಧವನೂ ಒಮ್ಮಿಂದೊಮ್ಮೆ ಇಲ್ಲದಾದನು! ಇದರಲ್ಲಿಯ ಅರ್ಥವೇನೋ, ಅನರ್ಥವೇನೋ, ಏನೂ ಗೊತ್ತಾಗದೆ ಮಕರಂದನು ಹುಚ್ಚನಾದನು. ಒಳ್ಳೇ ಪ್ರಮಾದದ ವೇಳೆಯಲ್ಲಿ ಮಾಲತಿಯು ಬದುಕಿದ್ದ ಸುದ್ದಿಯು ಅಕಸ್ಮಾತ್ತಾಗಿ ತಿಳಿದು ಮಹದಾನಂದವಾಗಿತ್ತು; ಈಗ ಮಾಧವನೂ ಅಕಸ್ಮಾತ್ತಾಗಿ ಅಡಗಿ ಹೊಸ ಹೆದರಿಕೆಯುಂಟಾದುದರಿಂದ ಮಕರಂದನ ಚಿತ್ತವು ಒಂದುಕಡೆ ಸಂತೋಷದಿಂದಲೂ ಮತ್ತೊಂದು ಕಡೆ ದುಃಖದಿಂದಲೂ ಬೆರತು ಚಂಚಲವಾಯಿತು. ಕಡೆಗೆ,— ಎನೊ! ಈ ಯೋಗೀಶ್ವರಿಯ ಮಹಿಮೆಯನ್ನಾರು ಬಲ್ಲರು!—ನಮಗೇಕೆ ಕಲ್ಯಾಣವಾಗಬಾರದು!— ಎಂಬ ವಿಶ್ವಾಸದಿಂದ, ಕಾಮಂದಕಿಯನ್ನು ಕಂಡು ಈ ವರ್ತಮಾನವನ್ನು ಹೇಳಬೇಕೆಂದು ಬೇರೊಂದು ಮಾರ್ಗದಿಂದ ಅಡವಿಯಲ್ಲಿ ನಡೆದನು.

( ಸೌದಾಮಿನೀ ದರ್ಶನವೆಂಬ ಒಂಭತ್ತನೆಯ ಅಧ್ಯಾಯವು. )

## ೧೦ನೇ ಅಧ್ಯಾಯವು.

ಮಾಧವನು ಮಕರಂದನೊಡನೆ ಊರು ಬಿಟ್ಟು ಅಡವಿಗೆ ತೆರಳಿದಮೇಲೆ ಕಾಮಂದಕೀಮೊದಲಾದವರು ನಾನಾದರೂ ಮಾಲತಿಯನ್ನು ಕಳಕೊಂಡು ಊರಲ್ಲಿದ್ದು ಮಾಡುವ

ದೇನು ?—ಎಂಬ ನಿರಾಶೆಯು ಖೇದದಿಂದ ಕಾಡುಸೇರಿದರು. ಮಾಲತಿಯು ಹುಟ್ಟಿದಂದಿನಿಂದ ಆವಳ ಸವಿಸವಿಯ ಬಾಲಲೀಲೆಗಳನ್ನು ಕಣ್ಣಾರೆ ಕಂಡು ಕಂಡು ಮನದಣಿದ ಕಾಮಂದಕಿಗೆ ಮಾಲತಿಯು ಹೊರತು ಜೀವವು ನಿಲ್ಲದಿದ್ದದ್ದು ಏನಾಶ್ಚರ್ಯವು ? ಮಾಲತಿಯ ಮಧುರ ಚೇಷ್ಟೆಗಳನ್ನೆಲ್ಲ ನೆನಪುಮಾಡಿಕೊಂಡು ಕಾಮಂದಕಿಯು ಶೋಕಿಸಹತ್ತಿದಳು.—" ಹಾ ! ಕಂದವ್ವಾ ! ನನ್ನ ತೊಡೆಯಮೇಲೆ ನಿನ್ನನ್ನಾಡಿಸುವಾಗ ನಿನ್ನ ಮುದ್ದು ಮೊಗದಿಂದ ಹೊರಡುವ ತೊದಲ್ನುಡಿಯನ್ನೂ, ನೀನು ಅಳುವಾಗಲು ನಗುವಾಗಲೂ ಮಲ್ಲಿಗೆ ಮೊಗ್ಗೆಯಂತೆಸೆವ ನಿನ್ನ ಎಳೆಹಲ್ಲುಗಳನ್ನೂ, ಎಷ್ಟು ನೆನಿಸಿಕೊಂಡರೂ ಸಾಲದು ! ಅಯ್ಯೋ ! ಮಗಳೇ ! ಚಂದ್ರಮುಖಿಯೇ ! ನೀನೆಲ್ಲಿ ಹೋಗಿರುವೆ ! ಈ ಅರಿಷ್ಟವು ನಿನ್ನೊಬ್ಬಳನ್ನೇ ಎಲ್ಲಿ ಕಾದುಕೊಂಡು ಕೂತಿತ್ತು ! ನೀನಿಲ್ಲದೆ ಮಾಧವನ ಬಾಳುವೆ ಏನಾಗುವದೋ ! ನೀವೀರ್ವರು ಸಲುಗೆಯಿಂದ ಕೂಡಿದ್ದುದನ್ನು ಕಂಡು ಆವ ರಕ್ಕಸನ ಹೊಟ್ಟೆಯುರಿಯಿತೋ ? ಅಕಟಕಟಾ ! ಅದೃಷ್ಟವೇ ! ಎದೆಯೆದೆ ಬಡಕೊಂಡು ರೋದನಮಾಡುವ ನಮ್ಮ ಮೊರೆಯನ್ನು ಆರೂ ಕೇಳುವದಿಲ್ಲವಲ್ಲ ! ದೀಪವು ನಂದಿಹೋದಮೇಲೆ ಕಪ್ಪಾಗುವ ಬತ್ತಿಯಂತೆ ನಮ್ಮವಸ್ಥೆಯಾಯಿತಲ್ಲ ! ಎಲೈ ! ಕಠೋರಳಾದ ಮಾಲತಿಯೇ ! ನನ್ನ ಬೆಚ್ಚನ್ನ ಕೋರಿಯ ಕಾವಿನಿಂದಲೇ ಬಳೆದು ಈಗ ಕರುಣೆಯಿಲ್ಲದೆ ತೊಲಗಿ ಹೋಗುವೆಯಾ ? ನೀನು ಮೊಲೆ ಬಿಟ್ಟಂದಿನಿಂದ ರನ್ನದ ಗೊಂಬೆಯಂತೆ ನಿನ್ನನ್ನು ಜೋಕೆ ಮಾಡಿ, ಉಣಿಸಿ ತಿನಿಸಿ ಬಳೆಯಿಸಿ ಲೋಕೋತ್ತರನಾದ ಗಂಡನಿಗೆ ಹೊಂದಿಸಿ ನಿನ್ನ ತಾಯಿಗಿಂತಲೂ ಹೆಚ್ಚಿಗೆ ಲಾಲಿಸಿದುದಕ್ಕೆ ಒಳ್ಳೇ ವಿಹಿತವಾಯಿತು ! ನಿನ್ನ ಹೊಟ್ಟೆಯಲ್ಲಿ ಕಂದವ್ವನಾದರೂ ಇದ್ದರೆ ನೋಡಿ ಸುಖಬಡುತ್ತಿದ್ದೆನಲ್ಲ ! ಹಣೆಯಲ್ಲಿ ಸಾದುಬೊಟ್ಟನ್ನೂ ಕಣ್ಣಿನಲ್ಲಿ ಕಾಡಿಗೆಯನ್ನೂ ಹಚ್ಚಿಕೊಂಡು ಕಾರಣವಿಲ್ಲದೆ ಕಿಲಿಕಿಲಿ ನಗುತ್ತಾ ಮೊಲೆಯುಣ್ಣುವ ಕುವರನನ್ನಾದರೂ ನಿನ್ನ ತೊಡೆಯಮೇಲೆ ನೋಡುವ ಭಾಗ್ಯವು ನನ್ನ ಅದೃಷ್ಟಕ್ಕೆ ಇಲ್ಲವಾಯಿತೇ ! ಅಯ್ಯೋ ! ನಾನೆಂಥ ದೈವಗೇಡಿಯು ! ಅಮಮಾ ! ಈ ಮನೋವ್ಯಥೆಯನ್ನು ಹೇಗೆ ಸೈರಿಸಲಿ ! "—ಎಂದು ಇನ್ನೂ ನಾನಾಪರಿಯಿಂದ ಅಳುವ ಕಾಮಂದಕಿಯನ್ನು ನೋಡಿ, ಹೊಟ್ಟೆಯಲ್ಲಿ ಕಸವಿಸಿಯು ಹಿಡಿಸದೆ ಲವಂಗಿಕೆಯೂ ಬಿಕ್ಕಿಬಿಕ್ಕಿ ದೊಡ್ಡ ದನಿಯಿಂದ ಅತ್ತು ಅತ್ತು ಕಣ್ಣು ಬಾಯಿಸಿಕೊಂಡು—ಅಮ್ಮಾ ಕಾಮಂದಕೀ ! ನನ್ನ ಜೀವವೂ ನಿಲ್ಲಲೊಲ್ಲದು ! ಇದೇ ಬೆಟ್ಟದ ತುದಿಯಿಂದ ಕೆಳಗೆ ಹಾರಿಕೊಂಡು ಪ್ರಾಣವನ್ನು ಕೊಡುತ್ತೇನೆ. ಮುಂದಿನ ಜನ್ಮದಲ್ಲಾದರೂ ನನ್ನ ಪ್ರಿಯಸಖಿಯನ್ನು ಕಾಣುವಂತೆ ನನಗೆ ದಯಮಾಡಿ ಆಶೀರ್ವಾದವನ್ನೀಯಿರಿ—ಎನ್ನಲು ಕಾಮಂದಕಿಯು—ಲವಂಗಿಕೇ ! ಮುಂದಿನ ಜನ್ಮದ ಮಾತು ನಮಗೇಕೆ ! ಇಷ್ಟ ಮಿತ್ರರನ್ನು ತಿರುಗಿ ಕಾಣುವದೂ ಬಿಡುವದೂ ಅವರವರ ಕರ್ಮದ ಮೇಲೆ ಅವಲಂಬಿಸಿರುತ್ತದೆ. ನಾನಾದರೂ ಮಾಲತಿಯನ್ನು ಕಳಕೊಂಡು ಏತಕ್ಕೆ ಬದುಕಿರಬೇಕು ? ನಾವೆಲ್ಲರೂ ಸಮದುಃಖಿಗಳಾದುದರಿಂದ ಪ್ರಾಣಗಳನ್ನು ಬಿಟ್ಟು ಈ ಕ್ರೂರ ಬಳಲಿಕೆಯನ್ನಾದರೂ ಹಿಂಗಿಸುವ—ಹೀಗೆಂದು ಮಡ

ಯಂತಿಕೆಯ ಕಡೆ ನೋಡಲು, ಮದಯಂತಿಕೆಯೂ ಮನಸದಲ್ಲಿ ಮಕರಂದನಿಗೆ ಕಡೆಯ ನಮಸ್ಕಾರಮಾಡಿ, ಎಲ್ಲರಕೂಡ ಪ್ರಾಣಕೊಡಲಿಕ್ಕೆ ಟೊಂಕ ಕಟ್ಟಿದಳು. ಕಾಮಂದ ಕಿಯು ಲವಂಗಿಕೆಯನ್ನೂ ಮದಯಂತಿಕೆಯನ್ನೂ ಸಂಗಡ ಕರಕೊಂಡು ಬೆಟ್ಟದ ತುದಿ ಯನ್ನೇರಿದಳು. ಕೆಳಗೆ ಬೆಟ್ಟದಡಿಯಲ್ಲಿ ಬೆಟ್ಟವನ್ನು ಕೊರೆದು ಮಧುಮತಿಯೆಂಬ ಹೊಳೆಯು ಹರಿಯುತ್ತಿತ್ತು. ಎಲ್ಲರೂ ಅದರಲ್ಲಿ ಒಮ್ಮೆಲೆ ಹಾರಿಕೊಳ್ಳಬೇಕೆಂದು ಸಿದ್ಧ ರಾಗಿ ಒಬ್ಬರಕೈಯನ್ನೊಬ್ಬರು ಹಿಡಿದು ಮುಂದೆ ಹೆಜ್ಜೆಯಿಟ್ಟು ಜೀಟುಗಾಲುಕೊಟ್ಟು ಜಿಗಿ ಯುವಸ್ಟರಲ್ಲಿ ದೂರದಿಂದಾರೋ ಕೂಗುವಂತೆ ವನಿಯು ಕೇಳಬಂತು. ಕೂಡಲೆ ಮಕ ರಂದನು ಕಣ್ಣಿಗೆ ಬಿದ್ದು ಓಡಿ ಹತ್ತರಬಂದು—ಏನಾಶ್ಚರ್ಯವಿದು! ಕುಡಿಮಿಂಚಿನ ಸೆಳೆ ಯಂತೆ ಕಣ್ಣುಕುಕ್ಕಿಸಿ ಕತ್ತಲೆಯನ್ನು ಹರಹಿಹೋದ ಚಮತ್ಕಾರವು! ಅಹಹ! ಆ ಯೋಗಿಶ್ವರಿಯ ಮಹಿಮೆಯು ಅತ್ಯಗಾಧವು!—ಹೀಗೆಂದು ಸೌದಾಮಿನಿಯ ಸುದ್ದಿಯ ನ್ನೆಲ್ಲ ಕಾಮಂದಕಿಗರುಹಲು ಎಲ್ಲರೂ ಬೆರಗಾಗಿ ಬೊಟ್ಟುಕಚ್ಚಿದರು.

ಅತ್ತ ಪಟ್ಟಣದಲ್ಲಿ ಕಾಮಂದಕಿಯು ಸಹ ಊರುಬಿಟ್ಟು ಅಡವಿಗೆ ಹೋದ ಸುದ್ದಿಯು ಹಬ್ಬಲು, ಭೂರಿವಸುವು ತೀರ ಎದೆಗುಂದಿ ಏನು ಮಾಡಬೇಕೆಂಬದು ತೋಚದೆ ವಿರಕ್ತನಾಗಿ ಸಂಸಾರಕ್ಕೂ ಜೀವಕ್ಕೂ ಬೇಸತ್ತು, ಯಾರು ಏನು ಹೇಳಿದರೂ ಸಮಾ ಧಾನಬಡದೆ, ತನ್ನ ಇದ್ದ ಬಿದ್ದ ಆಸ್ತಿಯನ್ನೆಲ್ಲ ಗೊತ್ತಿಗೆ ಹಚ್ಚಿ, ಬಡಬಗ್ಗರಿಗೆ ಧನಧಾನ್ಯ ಗಳನ್ನು ದಾನಮಾಡಿ, ತಾಳಿಯನ್ನು ಹೊತ್ತಿಸಿ ಬೆಂಕಿಯಲ್ಲಿ ಬೀಳಬೇಕೆಂದೆಣಿಸಿ ಸುವರ್ಣ ಬಿಂದು ದೇವಾಲಯವನ್ನು ಕುರಿತು ತೆರಳಿದನು. ಪೌರಜನರೆಲ್ಲರೂ (ಕನಿಕರದಿಂದ) ಗೋಳಾಡುತ್ತ ಹಿಂಬಾಲಿಸಿದರು. "ಅಯ್ಯೋ! ನಮ್ಮೂರಿಗೆ ಏನು ಮಾರಿ ಬಂತಪ್ಪಾ!" ಎಂದು ಜನರೆಲ್ಲ ಮರಮರ ಮರಗಿದರು. ಮಾಲತಿಯು ಬದುಕಿರುವ ಳೆಂದು ಆನಂದದಲ್ಲಿ ಮುಳುಗಿದ್ದ ಕಾಮಂದಕೀ ಮುಂತಾದವರಿಗೂ ಈ ಗದ್ದಲವು ಪರಂಪ ರೆಯಿಂದ ತಿಳಿಯಲು ಚಂದನರಸದ ಮಳೆಯಾಗಿ ಮೇಲೆ ಅಲಗುಗರೆದಂತೆಯೂ, ಇಲ್ಲವೆ ಅಮೃತದ ಹನಿಗಳೂ ಕೆಂಡದಕಿಡಿಗಳೂ ಕೂಡಿ ಸುರಿದಂತೆಯೂ ಸಂಜೀವನೌಷಧಿ ಯನ್ನು ಕೊಟ್ಟು ಮೇಲೆ ತೀಕ್ಷ್ಣವಾದ ವಿಷವನ್ನು ಕುಡಿಸಿದಂತೆಯೂ, ಹಸನಾದ ಬೆಳ ದಿಂಗಳಲ್ಲಿ ಸಿಡಿಲು ಅಬ್ಬರಿಸಿ ಎರಗಿದಂತೆಯೂ, ಬೆಳಕಿನಲ್ಲಿ ಕತ್ತಲೆಬೆರಕಂತೆಯೂ ಆಗಿ ಒಂದುಕಡೆ ಹರುಷದಿಂದಲೂ ಒಂದುಕಡೆ ಕನಿಕರದಿಂದಲೂ ಅವರ ಚಿತ್ತವು ಒಮ್ಮೆಲೆ ತಲ್ಲಣಿಸಿದ.ದೇನಾಶ್ಚರ್ಯವು? ಭೂರಿವಸುವಂತೂ ಚಿತಾಗ್ನಿಯಲ್ಲಿ ಬೀಳಲಿಕ್ಕೆ ಸಿದ್ಧನಾ ದನು. ಕಾಮಂದಕಿ ಮುಂತಾದವರಿಗೆ ಮಾಲತಿಯು ಬದುಕಿರುವಳೆಂದು ತಿಳಿದಿದ್ದರೂ ಈವರೆಗೂ ಅವಳ ದರುಶನವೇ ಇದ್ದಿಲ್ಲ! ಮಾಧವನೂ ಎಲ್ಲಿಯೋ ಅಡಗಿ ಹೋಗಿದ್ದನು! ಇದೆಲ್ಲ ಚಮತ್ಕಾರವು ಏನಿರಬಹುದು? ಇದರ ಪರಿಣಾಮವೇನು? ಏನು ಮಾಡಬೇ ಕು?—ಎಂಬ ಚಿಂತೆಯಲ್ಲಿ ಕಾಮಂದಕಿಯೂ ಲವಂಗಿಕೆ ಮದಯಂತಿಕೆಯರೂ ತೊಡಗಿ

ಹೋಗಿದ್ದರು; ಅಯ್ಯೋ ನಮ್ಮ ಬಾಳುವೇ ಸುಡಲಿ! ಊರೆಲ್ಲ ಹಾಳಾಗಿ ಹೋಯಿತು! ಇನ್ನೇನುಗತಿ! —ಎಂದು ಊರ ಜನರೆಲ್ಲರು ಗೋಳಾಡಹತ್ತಿದರು.

ಅತ್ತ ಸೌದಾಮಿನಿಯು ಮಾಧವನೊಂದಿಗೆ ಶ್ರೀಪರ್ವತಕ್ಕೆ ಹೋಗಿದ್ದಳಷ್ಟೇ! ಅಲ್ಲಿ ಮಾಧವನಿಗೆ ಮಾಲತಿಯ ದರುಶನ ಮಾಡಿಸಿ, ಈರ್ವರನ್ನು ಸಂಗಡ ಕರಕೊಂಡು ಕಾಮಂದಕಿ ಇದ್ದೆಡೆಗೆ ಬರಬೇಕೆಂದು ಅತಿವೇಗದಿಂದ ಆಕಾಶಮಾರ್ಗವಾಗಿ ಬರುತಿರಲು— ಭೂರಿವಸುವು ಬೆಂಕಿಯಲ್ಲಿ ಬೀಳುತ್ತಾನೆಂದೂ, ಸ್ವತಃ ಅರಸನು ನಂದನನೊಂದಿಗೆ ಬಂದು ಭೂರಿವಸುವಿನ ಕಾಲಿಗೆರಗಿ ಬೇಡಬೇಡವೆಂದು ಎಷ್ಟು ಬಗೆಯಿಂದ ಬೇಡಿಕೊಂಡರೂ ದೃಢಮನಸಿನವನಾದ ಭೂರಿವಸುವು ಕೇಳಲೊಲ್ಲನೆಂದೂ, ಜನರ ಗೋಳಾಟವು ಅವಳಿಗೆ ಕೇಳಬಂತು. ಆದುದರಿಂದ ಮಾಲತಿಯನ್ನೂ ಮಾಧವನನ್ನೂ ಬಿಟ್ಟು ತಾನೊಬ್ಬಳೇ ಸುವರ್ಣಬಿಂದು ದೇವಾಲಯದೆಡೆಗೆ ಇಳಿದು ನಡೆದಳು.

ಇತ್ತ ಮಾಧವನು ಮಾಲತಿಯೊಡನೆ ಕಾಮಂದಕಿಯನ್ನು ಶೀಘ್ರ ಕಾಣಬೇಕೆಂದು ಬರಲು, ಮಾಲತಿಯು ತನ್ನ ತಂದೆಯ ಸುದ್ದಿಯನ್ನು ಕೇಳಿ ಹಾಹಾರಿ— ಅಪ್ಪಾ! ಅಪ್ಪಾ! ಸಕಲಮಾನ್ಯನಾದ ನೀನು ನನ್ನ ಸಲುವಾಗಿ ನಿನ್ನ ಬೆಲೆಯುಳ್ಳ ಜೀವನವನ್ನೇಕೆ ಕಳೆದು ಕೊಳ್ಳುವೆ? ನಿಲ್ಲು! ನನಗೊಮ್ಮೆ ದರ್ಶನವನ್ನಾದರೂ ಕೊಡು. ಅರಿಯದೆ ನಾನು ನಿನಗೆ ಕಟುಕನೂ ಕಲ್ಲುಮನಸಿನವನೂ ಎಂದು ಹೆಸರಿಟ್ಟೆನಲ್ಲ! ಅಯ್ಯೋ! ನಾನೆಂಥ ಪಾಪಿಯು! ನಿನ್ನಂಥ ನಿರ್ಮಳ ಮನಸ್ಸಿನ ಕುಲದೀಪಕನಮೇಲೆ ಇಲ್ಲದ ತಪ್ಪು ಸುಮ್ಮನೇ ಹೊರಸಿದೆನಲ್ಲ! ಸುಡಲಿ ನನ್ನ ಜನ್ಮವು!—ಹೀಗೆನ್ನುತ್ತ ನಾನಾಪರಿಯಿಂದ ಮರುಗಿ ಹಣೆಹಣೆ ಬಡಕೊಂಡು ಎಚ್ಚರದಪ್ಪಿ ಬಿದ್ದಳು. ಮೊದಲೇ ಹಾದಿಯ ದಣುವಿಕೆಯಿಂದ ತೇಕುಹತ್ತಿ ಉಬ್ಬಸಗೊಂಡಿದ್ದಳು, ಅದರಲ್ಲಿ ತಂದೆಯ ದಸಕು ಬಡಿಯಲು ಗಾಬರಿಯಿಂದ ಉಸಿರಾಡುವದು ತುಸು ಕಟ್ಟಾಯಿತು. ಎದೆಗುಂಡಿಗೆಯು ಸ್ವಲ್ಪ ಮಂದವಾಗಿ ಹಾರಹತ್ತಿತು. "ಮಾಲತೀ ಮಾಲತೀ"— ಎಂದು ಹೆಸರುಗೊಂಡು ಎಷ್ಟು ಒದರಿ ಕೂಗಿದರೂ ದೇಹಭಾನವೇ ಇಲ್ಲದಂತಾಯಿತು! ಮಾಲತಿಯ ದರುಶನವೇ ಕಾಮಂದಕಿಯವರಿಗೆ ಮಹಾಭಾಗ್ಯೋದಯವೆಂದೆಣಿಸಿತ್ತು; ಇಷ್ಟರಲ್ಲಿ ಮರಳಿ ಹೀಗಾದುದನ್ನು ಕಂಡು ಅವರ ದುಃಖಕ್ಕೆ ನೆಲೆಯಿಲ್ಲದೆ ಹೋಯಿತು! "छिद्रेष्वनर्था बहुलीभवंति" ಎಂಬ ನ್ಯಾಯದಂತೆ, ಒಮ್ಮೆ ಏನಾದರೊಂದು ಕೇಡಾದರೆ ಅದರ ಕಾಟವು ಅಲ್ಲಿಗೇ ಮುಗಿಯುವದಿಲ್ಲ; ಒಂದರಹಿಂದೊಂದು ಪರಿಪಡಿಯಿಂದ ಎಡೆಬಿಡದೆ ಅನರ್ಥಗಳು ಬಂದೊದಗುತ್ತವೆ. ದೈವಗೇಡಿಯಾದ ಮಾಲತಿಯ ಹಾಡಾದರೂ ಹೀಗಾಗಿತ್ತು. ತಂದೆಯು ಸಲುವಾಗಿ ಮಗಳಿಗೆ, ಮಗಳ ಸಲುವಾಗಿ ತಂದೆಗೆ ಹೀಗೆ ಎರಡು ಅನರ್ಥಗಳು ಒಮ್ಮೆಲೆ ಸಂಭವಿಸಿದುದನ್ನು ಕಂಡು ಎಲ್ಲರು ವ್ಯಸನದಿಂದ ಹಮ್ಮಯಿಸಿ ನೆಲದ ಮೇಲೆ ಬಿದ್ದರು. ಇಷ್ಟರಲ್ಲಿ ಒಂದು ಚಮತ್ಕಾರವಾಯಿತು. ಅದೇನೆಂದರೆ—ಆಗಸದಲ್ಲಿ ಒಂದಾದರು ಮೋಡವಿರದಿದ್ದರೂ ಎಲ್ಲಿಂದಲೋ ಮಳೆಹನಿಗಳುದುರಿ ಮಾಲತಿಯನ್ನೂ ಕಾಮಂದಕಿ ಮುಂತಾದವ

ರನ್ನೂ ಎಚ್ಚರಗೊಳಿಸಿದವು. ಮಾಲತಿಯು ಎದೆಯು ಮೊದಲಿನಂತೆ ಹಾರಹತ್ತಿತು; ಕಣ್ಣುಗಳು ಮಿರುಪಿನಿಂದ ಹೊಳೆಯು ಹತ್ತಿದವು. ಮುಂಜಾವಿನ ಎಳೆಬಿಸಿಲಿನಿಂದರಳುವ ಕೆಂದಾವರೆಯೋಪಾದಿಯಲ್ಲಿ ಮಾಲತಿಯ ಮೊಗವು ಕಳೆಯೇರಿ ಪ್ರಸನ್ನವಾದುದನ್ನು ಕಂಡು ಎಲ್ಲರ ಹಿಗ್ಗು ಹಿಡಸದೆ ಹೋಯಿತು! ಕಾಮಂದಕಿಯಂತೂ ಮಾಲತಿಯನ್ನು ಪ್ರೇಮದಿಂದ ತಬ್ಬಿ—ಬಾ, ನನ್ನ ಅರಗಿಳಿಯೇ! ಬಾ ನನ್ನ ಮುದ್ದು ಮಗಳೇ! ಕಂದಮ್ಮಾ! ನೀನೇ ನಮ್ಮೆಲ್ಲರ ಪ್ರಾಣಗಳನ್ನು ಸಲಹಿದೆ!—ಎಂದು ಮುಂದಲೆ ಹಿಡಿದು ಅಕ್ಕರೆಯಿಂದ ಮುಂಡಾಡಿದಳು. ಗೆಳತಿಯರಾದ ಲವಂಗಿಕೆಯೂ ಮದಯಂತಿಕೆಯೂ ಮಾಲತಿಯ ಪ್ರೇಮಾಲಿಂಗನವನ್ನಪೇಕ್ಷಿಸಿದರು. ಮಾಧವಮಕರಂದರಿಗೂ ಪರಮಾವಧಿಯ ಆಲ್ಹಾದವೂ ಉತ್ಸಾಹವೂ ಉಂಟಾದವು.

ಇಷ್ಟರಲ್ಲಿ ಮಾಲತಿಯು ಬದುಕಿರುವಳೆಂದು ಭೂರಿವಸುವಿಗೆ ಆಶ್ವಾಸನವನ್ನು ಕೊಟ್ಟು ಅವನು ಚಿತೆಯಲ್ಲಿ ಬೀಳುವದನ್ನು ಸಿಲ್ಲಿಸಿ, ಸೌದಾಮಿನಿಯು ಕಾಮಂದಕಿಯ ದರುಶನಕ್ಕಾಗಿ ಮೇಲಿಂದ ಇಳಿದು ಬಂದು—ಭಗವತೀ ಕಾಮಂದಕೀ ನಿನ್ನ ಪೂರ್ವದ ಗೆಳತಿಯಾದ ಸೌದಾಮಿನಿಯ ಪ್ರಣಾಮವನ್ನು ಸ್ವೀಕರಿಸು.—ಎಂದು ಕಾಮಂದಕಿಯ ಚರಣಗಳಿಗೆರಗಿ ಕಪಾಲಕುಂಡಲೆಯು ಮಾಲತಿಯನ್ನು ಕೊಂಡೊಯ್ದ ಸುದ್ದಿಯನ್ನೆಲ್ಲ ವಿಸ್ತಾರವಾಗಿ ಅರುಹಿದಳು. ಕಾಮಂದಕಿಯು ಸೌದಾಮಿನಿಯನ್ನು ಆಲಿಂಗಿಸಿ—ಬಾ, ನನ್ನ ಗೆಳತಿಯೇ ಬಾ! ನೀನೇ ನಮ್ಮೆಲ್ಲರಿಗೆ ಜೀವದಾನ ಕೊಟ್ಟು ಪುಣ್ಯವನ್ನು ಗಳಿಸಿದೆ! ನೀನೇ ಧನ್ಯಳು! ಇದಕ್ಕೇ ಯೋಗಸಿದ್ಧಿಯೆಂದೆನ್ನಬೇಕು. ನನ್ನ ಮೇಲಿನ ಪೂರ್ವದ ಮಮತೆಯನ್ನು ಮರೆಯದೆ ನಮ್ಮೆಲ್ಲರಿಗೆ ದೊಡ್ಡ ಉಪಕಾರವನ್ನು ಮಾಡಿದುದು ಬಹಳೇ ಯೋಗ್ಯವಾಯಿತು! ನಮ್ಮ ಪೂರ್ವಸ್ನೇಹದ ಮೊಳಕೆಯು ಇಂದು ನಮಗೆ ಒಳ್ಳೇ ಫಲದಾಯಕವಾಯಿತು.— ಎಂದು ಸೌದಾಮಿನಿಯನ್ನು ಬಹು ವಿಧದಿಂದ ಕೊಂಡಾಡಿದಳು. ಸೌದಾಮಿನಿಯು ಕಾಮಂದಕಿಯ ಮೊದಲಿನ ಸ್ನೇಹಿತಳೆಂದು ಮಾಧವನಿಗೂ ಮಕರಂದನಿಗೂ ಗೊತ್ತಿದ್ದಿಲ್ಲ; ಕಾಮಂದಕಿಯ ಮಾತಿನ ಮೇಲಿಂದ ಈ ಸಂಗತಿಯು ಅವರಿಗೆ ಈಗ ತಿಳಿದು—ಓಹೋ! ಇವಳು ಕಾಮಂದಕಿಯಮ್ಮನವರ ಸ್ನೇಹಿತಳೋ?! ಹಾಗಾದರೇನು? ಎಲ್ಲವು ಹೊಂದಿತು.—ಹೀಗೆಂದು ತಲೆದೂಗಲು, ಮಾಲತಿಯು—ನಮ್ಮವಳಂತೇ ಆ ಕಪಾಲಕುಂಡಲೆಯನ್ನು ಒಳಿತಾಗಿ ಸಿಟ್ಟು ಮಾಡಿ, ನನ್ನನ್ನು ತನ್ನ ಮನೆಗೆ ಕರೆದೊಯ್ದು ಭಗವತಿಗಿಂತಲೂ ಹೆಚ್ಚಾಗಿ ನನ್ನ ಆದರಾತಿಥ್ಯವನ್ನು ಮಾಡಿ, ಆ ಕರುಹಿನ ಬಕುಳಹಾರದಿಂದ ನಿಮ್ಮೆಲ್ಲರನ್ನು ಬದುಕಿಸಿದಳು.— ಎಂದೆನಲು ಲವಂಗಿಕೆಮದಯಂತಿಕೆಯರೂ ಬಹಳೇ ವಿಹಿತವಾಯಿತೆಂದು ಹೊಗಳಿ ತಮ್ಮ ಕೃತಜ್ಞತೆಯನ್ನು ತೋರಿಸಿದರು.

ಚಿಂತಾಮಣಿಯು ಚಿಂತಿಸಿದ ವಸ್ತುವನ್ನು ದೊರಕಿಸಿ ಕೊಡುವದೆಂದು ಹೇಳುತ್ತಾರೆ. ಆದರೂ ಅದಕ್ಕೆ ಚಿಂತಿಸುವ ಶ್ರಮವು ಬೇಕಾಗುತ್ತದೆ. ಇಲ್ಲಿ ಯಾರ ಕನಸುಮನಸಿನಲ್ಲಿ

ಯೂ ಇಲ್ಲದೆ, ಸೌದಾಮಿನಿಯು ಆಶ್ಚರ್ಯಕರವಾದ ತನ್ನ ಮಹಿಮೆಯನ್ನು ತಾನೇ ತೋರಿಸಿದ ಕಾರಣದಿಂದ ಚಿಂತಾಮಣಿಗಿಂತಲೂ ಇವಳ ಯೋಗ್ಯತೆಯು ಹೆಚ್ಚಿನದಾಯಿತೆಂದು ಎಲ್ಲರು ಇವಳನ್ನು ಬಗೆಬಗೆಯಿಂದ ಕೊಂಡಾಡಹತ್ತಲು, ಸೌದಾಮಿನಿಯು ತುಸು ಲಜ್ಜಿತಳಾಗಿ ತಲೆಬಾಗಿ ಕಾಮಂದಕಿಗೆ—ಅಮ್ಮಾ, ನಾನು ಮಾಡುವ ಕರ್ತವ್ಯವನ್ನು ಮಾಡಿರುತ್ತೇನಷ್ಟೇ; ಹೆಚ್ಚಿನದೇನೂ ಮಾಡಿಲ್ಲ. ನಿಮ್ಮೆಲ್ಲರ ಹೊಗಳಿಕೆಗೆ ನಾನಿಷ್ಟು ಪಾತ್ರಳಲ್ಲ. ಒಳ್ಳೇದು ಅದಂತಿರಲಿ: ಪದ್ಮಾವತಿಯ ಒಡೆಯರು ಹರುಷಿತನಾದ ನಂದನನ ಹೇಳಿಕೆಯ ಮೇಲಿಂದ ಭೂರಿವಸುವಿನ ಸಮಕ್ಷದಲ್ಲಿ ಕುವರನಾದ ಮಾಧವನ ಹೆಸರಿನಿಂದೊಂದು ಓಲೆಯನ್ನು ಬರೆದು ಕಳುಹಿಸಿರುವರು. ಇಕೋ, ಇದೇ ಲೇಖವು—ಎಂದು ಕಾಮಂದಕಿಗೆ ಓಲೆಯನ್ನರ್ಪಿಸಲು ಕಾಮಂದಕಿಯು ಆ ಪತ್ರವನ್ನು ತೆರೆದು ಓದಿದಳೇನಂದರೆ—"ಸ್ವಸ್ತಿ ಶ್ರೀಶ್ಲಾಘ್ಯಗುಣಾನ್ವಿತನಾದ ಕುಮಾರ ಮಾಧವನಿಗೆ ಪದ್ಮಾವತಿಯ ನಗರಾಧಿಪತಿಯು ಆಶೀರ್ವಾದವನ್ನಿತ್ತು ಆಜ್ಞಾಪಿಸುವದೇನಂದರೆ—ಅಮಾತ್ಯ ಭೂರಿವಸುವಿಗೆ ಶ್ರೇಷ್ಠ ಕುಲದಲ್ಲಿ ಹುಟ್ಟಿದ ಸುಗುಣನಾದ ನಿನ್ನಂಥ ಅಳಿಯನು ದೊರೆತುದು ಬಹಳೇ ವಿಹಿತವಾಯಿತು; ನಾವೂ ನಿಮ್ಮಿರ್ವರ ವಿವಾಹಕ್ಕೆ ಪೂರಾ ಒಪ್ಪಿದ್ದೇವೆ. ಆದುದರಿಂದಲೇ ನಿನ್ನ ಪರಮಮಿತ್ರನಾದ ಮಕರಂದನಿಗೆ ಮೊದಲೇ ಮೆಚ್ಚಿದ ನಮ್ಮ ಮದಯಂತಿಕೆಯನ್ನು ಈಗ ನಮ್ಮ ಸ್ವಸಂತೋಷದಿಂದ ಕೊಟ್ಟಿರುತ್ತೇವೆ. ದಯವಿಟ್ಟು ಪರಸ್ಪರ ಪ್ರೀತಿಯನ್ನು ಬೆಳಿಸುವದು."

ಪತ್ರದೊಳಗಿನ ಈ ಸಂಗತಿಯನ್ನು ಕೇಳಿ ಎಲ್ಲರೂ ಕೃತಾರ್ಥರಾದರು; ದೊರೆಗಳೇನೆನ್ನುವರೋ ಎಂಬ ಮನಸಿನ ದುಗದುಗಿಯು ಕಳೆದು ಹೋಗಿ ಸಕಲರು ನಿಶ್ಚಿಂತರಾದರು. ಮಾಲತೀಮಾಧವರ ಬಯಕೆಗಳಂತೂ ಪೂರಾ ನೆರವೇರಿದವು. ಮೊದಲು ವಿದ್ಯಾಪೀಠದಲ್ಲಿ ಭೂರಿವಸುದೇವರಾತರು ಮಾಡಿದ ಪ್ರತಿಜ್ಞೆಯು ಸೌದಾಮಿನಿಗೆ ಗೊತ್ತಿತ್ತು; ಏಕೆಂದರೆ ಅವಳ ಸಮಕ್ಷದಲ್ಲಿಯೇ ಅವರು ಪ್ರತಿಜ್ಞೆಯನ್ನು ಮಾಡಿದ್ದರು. ಈ ಪ್ರತಿಜ್ಞೆಯು ನೆನಪಿಗೆ ಬಂದು ಸೌದಾಮಿನಿಯು ಭೂರಿವಸುದೇವರಾತರ ಪಣವು ಕಡೆಗೆ ಗೆದ್ದಿತೆಂದು ಸ್ವಾಭಾವಿಕವಾಗಿ ನುಡಿಯಲು, ಈ ಪಣವನರಿಯದ ಮಾಲತಿಯೂ ಮಾಧವಮಕರಂದರೂ ವಿಸ್ಮಯಗೊಂಡು—ಇದೇನು, ಹೊಸ ಸುದ್ದಿಯು! ಕಾಮಂದಕಿಯಮ್ಮನವರ ಮಾತಿನಮೇಲಿಂದ ಅಮಾತ್ಯರು ಮೊದಲಿನಿಂದ ನಮಗೆ ಪ್ರತಿಕೂಲರಾಗಿರುವರೆಂದು ನಂಬಿದ್ದೆವಲ್ಲ! —ಎನಲು ಕಾಮಂದಕಿಯು, ಇನ್ನೇನು ಮದಯಂತಿಕೆಯೂ ನಮ್ಮವಳೇ ಆಗಿರುವಳು; ನಮ್ಮ ಒಳಸಂಚನ್ನೆಲ್ಲ ಒಡೆದು ಹೇಳಲಿಕ್ಕೇನೂ ಪ್ರತಿಬಂಧವಿಲ್ಲೆಂದು ಮನಸ್ಸಿನಲ್ಲೆಂದುಕೊಂಡು ಗಟ್ಟಿಯಾಗಿ—ಮಕ್ಕಳಿರಾ! ನಿಮ್ಮಿಂದ ಬಚ್ಚಿಡತಕ್ಕಂಥ ಗುಟ್ಟು ಏನೂ ಇಲ್ಲ. ಸೌದಾಮಿನಿಯೂ ನಾನೂ ಮೊದಲು ಕೂಡಿ ವಿದ್ಯಾಭ್ಯಾಸಂಗವನ್ನು ಮಾಡುವಾಗ ನಮ್ಮಿರ್ವರ ಸಾಕ್ಷಿಯಾಗಿ ಭೂರಿವಸುದೇವರಾತರು ತಮ್ಮ ಅಪತ್ಯಸಂಬಂಧವನ್ನು ಮಾಡತಕ್ಕದೆಂದು ಪಣವನ್ನು ಮಾಡಿದ್ದರು. ಆದರೆ ಈ ಸಂಗತಿಯು ಒಂದು

64

ಪುಸ್ತಕ ದೊರೆಯತಕ್ಕ ಸ್ಥಳ.

೧. ಬಾ. ಕೃ. ಹಳಪೇಟೆ, ಕಾರ್ಯದರ್ಶಿ
ಕರ್ನಾಟಕ ವಾಙ್ಮಯ ಸೇವಾ ಸಂಘ
ಧಾರವಾಡ.

೨. ಹ. ಕೃ. ಹುನಗುಂದ, ಮಾಳಮಡ್ಡಿ,
ಧಾರವಾಡ.